KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೭, ೨೦೦೬ (ವೈಶಾಖ ೭, ಶಕ ವರ್ಷ ೧೯೨೮) | ಸಂಚಿಕೆ ೧೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-01**

**ಅಧಿಸೂಚನೆ**

**ವಿಷಯ:** 2005ನೇ ಸಾಲಿನ ಗೆಜೆ಼ಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಹೆಚ್.ಎಸ್. ಕೃಷ್ಣೇಗೌಡ (ನೋಂ. ಸಂ. 415456) ಇವರಿಗೆ ದಂಡನೆ ವಿಧಿಸುವ ಬಗ್ಗೆ

**ಓದಲಾಗಿದೆ:** 1) ಶ್ರೀ ಹೆಚ್.ಎಸ್. ಕೃಷ್ಣೇಗೌಡ ಇವರು 2005ನೇ ಸಾಲಿನ ಗೆಜೆ಼ಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ ಅರ್ಜಿ

2) ಶ್ರೀ ಹೆಚ್.ಎಸ್. ಕೃಷ್ಣೇಗೌಡ ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್ ಹೆಚ್.ಎಸ್. 266/2005-06/ಪಿಎಸ್‌ಸಿ ದಿನಾಂಕ: 13-12-2005

3) ಶ್ರೀ ಹೆಚ್. ಎಸ್. ಕೃಷ್ಣೇಗೌಡ ಇವರು ದಿನಾಂಕ: 21-12-2005ರಂದು ಸಲ್ಲಿಸಿದ ಸಮಜಾಯಿಷಿ ಪತ್ರ

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ ಶ್ರೀ ಕೃಷ್ಣೇಗೌಡ ಹೆಚ್.ಎಸ್. ಇವರು 2005ನೇ ಸಾಲಿನ ಗೆಜೆ಼ಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 415456ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಶ್ರೀ ಹೆಚ್.ಎಸ್ ಕೃಷ್ಣೇಗೌಡ ಇವರು ದಿನಾಂಕ: 27-07-2005ರಂದು ಕ್ರಿಮಿನಾಲಜಿ ಪತ್ರಿಕೆ-1ರ ಪರೀಕ್ಷೆಗೆ ಹಾಜರಾಗಿ ಸದರಿ ಉತ್ತರ ಪತ್ರಿಕೆಯ ಕೊನೆಯಲ್ಲಿ "ದಯವಿಟ್ಟು ಕ್ಷಮಿಸಿ, ಕೊನೆಯಲ್ಲಿ ಬರೆಯಲು ಬಿಟ್ಟುಕೊಂಡೆ ಆದರೆ ಸಮಯ ಸಾಲಲಿಲ್ಲ. ಆದ್ದರಿಂದ ಬಿಟ್ಟಿದ್ದೇನೆ" ಎಂದು ಬರೆದು ಸಹಿ ಮಾಡಿರುತ್ತಾರೆ ಎಂಬುದಾಗಿ ಪರೀಕ್ಷಕರು ವರದಿ ಮಾಡಿ ಈ ಉತ್ತರ ಪತ್ರಿಕೆಯನ್ನು ಮೌಲ್ಯಮಾಪನ ಮಾಡಲು ಸಾಧ್ಯವಾಗದೆಂದು ಹಿಂತಿರುಗಿಸಿರುತ್ತಾರೆ.

ಸದರಿ ಉತ್ತರ ಪತ್ರಿಕೆಯ ಪುಟ 31ರಲ್ಲಿ ನೀಡಲಾಗಿರುವ "ಅಭ್ಯರ್ಥಿಗಳಿಗೆ ಸೂಚನೆಗಳು"ರಲ್ಲಿನ ಸೂಚನೆ-1ರಲ್ಲಿ "ಉತ್ತರ ಪತ್ರಿಕೆಯ ಒಳಗೆ ಅಥವಾ ಸಂಕ್ಷಿಪ್ತಗೊಳಿಸಿದ ಉತ್ತರದ ಹಾಳೆಗಳು, ನಕ್ಷೆಗಳು, ಗ್ರಾಫ್ ಪೇಪರ್ ಮುಂತಾದ ಯಾವುದೇ ಬಿಡಿ ಹಾಳೆಗಳಲ್ಲಿ ಎಲ್ಲಿಯೂ ನಿಮ್ಮ ಹೆಸರನ್ನಾಗಲೀ, ನೋಂದಣಿ ಸಂಖ್ಯೆಯನ್ನಾಗಲೀ ಬರೆಯಬಾರದು. ಯಾವುದೇ ಪತ್ರಿಕೆಯಲ್ಲಿನ ಪತ್ರ ಲೇಖನ ಪ್ರಶ್ನೆಗೆ ಬರೆದ ಉತ್ತರದಲ್ಲಿ ಸಹಿ ಮಾಡುವುದನ್ನಾಗಲೀ ಹೆಸರು ನೋಂದಣಿ ಸಂಖ್ಯೆಯನ್ನು ಬರೆಯುವುದನ್ನಾಗಲೀ ಮಾಡಬಾರದು" ಎಂದು ಸ್ಪಷ್ಟವಾಗಿ ಸೂಚನೆ ನೀಡಿದ್ದಾಗ್ಯೂ ಕ್ರಿಮಿನಾಲಜಿ ಪತ್ರಿಕೆ-1ರಲ್ಲಿ ಮೇಲೆ ತಿಳಿಸಿರುವಂತೆ ಬರೆದು ಸಹಿ ಮಾಡಿ ಪರೀಕ್ಷಾ ಸೂಚನೆಯನ್ನು ಉಲ್ಲಂಘಿಸಿದ ಕಾರಣ ಮೇಲೆ ಓದಲಾದ (2)ರನ್ವಯ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ (3)ರನ್ವಯ ಸಮಜಾಯಿಷಿ ನೀಡುತ್ತಾ, ಉತ್ತರ ಪತ್ರಿಕೆಯ ಮಧ್ಯಭಾಗದಲ್ಲಿ ಖಾಲಿ ಹಾಳೆ ಬಿಡಬಾರದೆಂದು ಸೀನಿಯರ್ಸ್‌ಗಳು ಸೂಚಿಸಿದ್ದರು. ಅದೇ ರೀತಿ ಸಮಯಕ್ಕೆ ಸರಿಯಾಗಿ ಪ್ರಶ್ನೆಯೊಂದರ ಉತ್ತರ ಹೊಳೆಯದ ಕಾರಣ ಪ್ರಶ್ನೆ ಕ್ರಮಾಂಕ ಅದಲು ಬದಲು ಮಾಡಬಾರದೆಂದು ಕೊನೆಯಲ್ಲಿ ಬರೆಯಲು ಖಾಲಿ ಜಾಗ ಬಿಡಲಾಗಿತ್ತು. ಆದರೆ ಕೊನೆಯಲ್ಲಿ ಸಮಯ ಸಾಲದ ಕಾರಣ ಖಾಲಿ ಬಿಡುವುದು ಅಪರಾಧವೆಂದು ಭಾವಿಸಿ ಆ ರೀತಿ ಬರೆಯಲಾಗಿದೆ. ಇದರಲ್ಲಿ

ಅಭ್ಯರ್ಥಿತ್ವವನ್ನು ಬಹಿರಂಗ ಪಡಿಸುವ ಉದ್ದೇಶವಿರಲಿಲ್ಲ. ಪುಟ 31ರಲ್ಲಿ ನೀಡಲಾದ "ಅಭ್ಯರ್ಥಿಗಳಿಗೆ ಸೂಚನೆಗಳು" ತಿಳಿದಿದ್ದರೂ ಆ ಸಮಯದಲ್ಲಿ ಅರಿವಿಗೆ ಬಾರದೆ ಈ ರೀತಿ ತಪ್ಪಾಗಿದೆ. ಇದನ್ನು ಕ್ಷಮಿಸುವಂತೆ ಕೋರಿರುತ್ತಾರೆ.

ಸದರಿ ಅಭ್ಯರ್ಥಿ ಸಲ್ಲಿಸಿದ್ದ ತಪ್ಪೊಪ್ಪಿಗೆ ಹೇಳಿಕೆಯನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಅಭ್ಯರ್ಥಿ ತಪ್ಪನ್ನು ಒಪ್ಪಿಕೊಂಡು ಉದ್ದೇಶಪೂರ್ವಕವಾಗಿ ಈ ಕೃತ್ಯವನ್ನು ಎಸೆಗಿಲ್ಲವೆಂದು ಹೇಳಿದ್ದರೂ ಸಹ ಇದು ಅಭ್ಯರ್ಥಿ ತನ್ನ ಗುರುತನ್ನು ಬಹಿರಂಗ ಪಡಿಸಿದ್ದಾರೆಂದೇ ಪರಿಗಣಿಸಲಾಗಿದೆ.. ಈ ರೀತಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಕಾರಣ ಇದೊಂದು ಪರೀಕ್ಷಾ ದುರಾಚಾರ ಪ್ರಕರಣವೆಂದು ತೀರ್ಮಾನಿಸಿ ಈ ಕೆಳಗಿನಂತೆ ದಂಡನೆ ವಿಧಿಸಲು ಆದೇಶ ನೀಡಿದೆ.

**ಆದೇಶ ಸಂಖ್ಯೆ: ಇ(1)1955/2005–06/ಪಿಎಸ್‌ಸಿ ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ 398/93–94/ಪಿಎಸ್‌ಸಿ ದಿನಾಂಕ: 14–07–1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಹೆಚ್.ಎಸ್. ಕೃಷ್ಣೇಗೌಡ (ನೋಂ. ಸಂ. 415456) ಬಿನ್ ಸಣ್ಣೇಗೌಡ ಹೆಚ್.ಆರ್, ಹಿರಿಕ್ಯಾತನ ಹಳ್ಳಿ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ, ಇವರಿಗೆ 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್. 685

**ಬಿ.ಎಸ್. ರಾಮಪ್ರಸಾದ್**

ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರ ವಿರುದ್ಧ ಶಿಸ್ತು ಕ್ರಮ.

**ಉಲ್ಲೇಖ:**
1) ಇಲಾಖಾ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:…:22:2002-03, ದಿನಾಂಕ: 27.2.2003.
2) ಇಲಾಖಾ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 31.1.2004.
3) ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಪತ್ರ ಸಂಖ್ಯೆ: ಸಕೃನಿಬಿ:ಸಿ-1:ಸಿಆರ್:2003-04, ದಿ: 26:28.4.2004.
4) ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರ ಲಿಖಿತ ಹೇಳಿಕೆ ಪತ್ರ ದಿನಾಂಕ: ಇಲ್ಲ.
5) ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ಇವರ ಪತ್ರ ಸಂಖ್ಯೆ: ಸಿಬ್ಬಂದಿ:ಎಸ್‌ವೈ:ಅಧೀಕ್ಷಕರು: ವಿಚಾರಣೆ:ಸಿಆರ್-1: 418:2004-05, ದಿನಾಂಕ: 3.7.2004.
6) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 24.8.2004.
7) ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಪತ್ರ ಸಂಖ್ಯೆ: ಸಿ-1:1:ಸಿಆರ್:2004-05:482, ದಿನಾಂಕ: 9.9.2004.
8) ಶ್ರೀ ಕೆ. ಈಶ್ವರ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ: 8.12.2004.
9) ಇಲಾಖಾ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 18.1.2005.
10) ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಪತ್ರ ಸಂಖ್ಯೆ: ಸಿ-1:ಸಿಆರ್:2004-2005:825, ದಿನಾಂಕ: 5:7.2.2005.
11) ಸಹಾಯಕ ಕೃಷಿ ನಿರ್ದೇಶಕರು ಬೀದರ್ ಇವರ ಪತ್ರ ಸಂಖ್ಯೆ: ಸಕೃನಿಬಿ:ಸಿಬ್ಬಂದಿ-1:ಸಿಆರ್:2004-05:847, ದಿ:17.2.2005
12) ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು ಇವರ ಮನವಿ ಪತ್ರ ದಿನಾಂಕ: 24.2.2005.
13) ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 22.3.2005.
14) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 15.4.2005.
15) ಸೂರ್ಯವಂಶಿ ವೈಜನಾಥರಾವ್, ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಭಾಲ್ಕಿ ಇವರ ಮನವಿ ದಿನಾಂಕ: 4.10.2005.
16) ಕೆ.ಎ.ಟಿ. ಎಮರ್ಜಂಟ್ ನೋಟೀಸ್ ದಿನಾಂಕ: 20.1.2006.
17) ಇಲಾಖಾ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 16.2.2006.
18) ಜಿಲ್ಲಾಧಿಕಾರಿಗಳು, ಬೀದರ್ ಇವರ ಪತ್ರ ಸಂಖ್ಯೆ: ಚುನಾ:ಸಿಆರ್:112:2004-05.

**ಪ್ರಸ್ತಾವನೆ:**

ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರು ದಿನಾಂಕ: 11.3.89 ರಂದು ಅವರ ಹುದ್ದೆಗೆ ರಾಜೀನಾಮೆ ಸಲ್ಲಿಸಿರುತ್ತಾರೆ. ನೌಕರರ ವಿರುದ್ಧ ಕರ್ತವ್ಯ ಚ್ಯುತಿಯ ಆರೋಪಗಳು ಹಾಗೂ ಗೃಹ ನಿರ್ಮಾಣದ ಮುಂಗಡ ಬಾಕಿ ಇದ್ದ ಪ್ರಯುಕ್ತ ಸದರಿ ರಾಜೀನಾಮೆಯು ಅಂಗೀಕಾರವಾಗಿರುವುದಿಲ್ಲ. ರಾಜೀನಾಮೆ ಅಂಗೀಕಾರವಾಗಿರುವುದನ್ನು ಖಚಿತಪಡಿಸಿಕೊಳ್ಳದೇ ನೌಕರರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ ಹಾಗೂ ಅನಧಿಕೃತ ಗೈರು ಹಾಜರಿಯನ್ನು ಮುಂದುವರೆಸಿ ಕರ್ತವ್ಯ ನಿರ್ಲಕ್ಷತೆ ಪ್ರದರ್ಶಿಸಿರುತ್ತಾರೆ. ನಂತರ ಗೃಹ ನಿರ್ಮಾಣದ ಮುಂಗಡದ ಬಾಬ್ತು ರೂ.24169-46 ಗಳನ್ನು ಸರ್ಕಾರಕ್ಕೆ ಪಾವತಿ ಮಾಡಿರುವುದಾಗಿ ದಿನಾಂಕ: 10.7.2002ರ ಪತ್ರದಲ್ಲಿ ತಿಳಿಸುತ್ತಾ, ಅವರ ಹಿಂದಿನ ಹುದ್ದೆಯಾದ, ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇಲ್ಲಿ ಕರ್ತವ್ಯಕ್ಕೆ ಹಾಜರಾಗಲು ಪರವಾನಗಿ ನೀಡಬೇಕೆಂದು ಮನವಿ ಸಲ್ಲಿಸಿರುತ್ತಾರೆ.

ಸದರಿ ನೌಕರರು ಸುಮಾರು 13 ವರ್ಷಗಳ ದೀರ್ಘಾವಧಿಯ ನಂತರ ಗೃಹ ನಿರ್ಮಾಣದ ಮುಂಗಡದ ಬಾಕಿ ಬಾಬ್ತನ್ನು ಪಾವತಿ ಮಾಡಿರುವುದಾಗಿ ತಿಳಿಸುತ್ತಾ, ಕಛೇರಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿರುವ ಮನವಿಯನ್ನು ಪರಿಶೀಲಿಸಲಾಗಿದೆ. ಈ ಅವಧಿಯಲ್ಲಿ ಅವರ ವಿರುದ್ಧ ಯಾವುದೇ ಶಿಸ್ತುಕ್ರಮ ತೆಗೆದುಕೊಂಡು ಅವರನ್ನು ಕರ್ತವ್ಯದಿಂದ ತೆಗೆದುಹಾಕಿಲ್ಲದ ಕಾರಣ ಅವರ ಮನವಿಯನ್ನು ಪರಿಗಣಿಸಿದ ಹಿನ್ನೆಲೆಯಲ್ಲಿ ಸದರಿ ನೌಕರರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ವಿಚಾರಣೆ ಬಾಕಿ ಇರಿಸಿ ಅವರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳುವ ಉದ್ದೇಶದಿಂದ ಓದಲಾದ ಕ್ರ.ಸಂ.(1) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ತಾಲ್ಲೂಕಿನಲ್ಲಿ ಖಾಲಿ ಇರುವ ಅಧೀಕ್ಷಕರ ಹುದ್ದೆಗೆ ಹಾಜರಾಗಲು ಅನುಮತಿಸಿ ನೇಮಕ ಮಾಡಿ ಆದೇಶಿಸಲಾಗಿತ್ತು. ಅದರಂತೆ ಸದರಿ ಆದೇಶವನ್ನು ನೌಕರರು ದಿನಾಂಕ: 29.3.2003 ರಂದು ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಮೂಲಕ ಪಡೆದು ಸ್ವೀಕೃತಿ ಸಲ್ಲಿಸಿರುತ್ತಾರೆ. ಸದರಿ ನೌಕರರಿಗೆ ಇಲಾಖಾ ಆದೇಶ ದಿನಾಂಕ: 27.2.2003 ರಲ್ಲಿ ಮರು ನೇಮಿಸಲ್ಪಟ್ಟಿದ್ದರೂ ಸಹ ಮರು ನೇಮಿಸಲ್ಪಟ್ಟ ಕಛೇರಿಗೆ 1 1/2 ವರ್ಷಕ್ಕೂ ಮೇಲ್ಪಟ್ಟ ಅವಧಿಯಾದರೂ ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ಕಛೇರಿಗಾಗಲೀ ಅಥವಾ ಇಲಾಖೆಯಲ್ಲಾಗಲೀ ಹಾಜರಾತಿ ಸಲ್ಲಿಸದೇ ಅನಧಿಕೃತ ಗೈರು ಹಾಜರಿಯನ್ನು ಮುಂದುವರೆಸಿರುತ್ತಾರೆ.

ಸದರಿ ನೌಕರರು ಈ ಹಿಂದೆ ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 24.4.1989 ರಿಂದ 29.3.2003 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆಂದು ಹಾಗೂ ನೌಕರರು ಸರ್ಕಾರಿ ಸೇವೆಯಲ್ಲಿರುವಾಗಲೇ ಬೀದರ್ ಕ್ಷೇತ್ರದಿಂದ ಅಸೆಂಬ್ಲಿ ಚುನಾವಣೆಗೆ ಸ್ಪರ್ಧಿಸಿರುತ್ತಾರೆಂದು ಓದಲಾದ ಕ್ರ.ಸಂ.(2)ರ ಇಲಾಖಾ ಸೂಚನಾ ಪತ್ರದಲ್ಲಿ ಸದರಿ ನೌಕರರಿಗೆ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ ದೋಷರೋಪಣಾ ಪಟ್ಟಿಯನ್ನು ಓದಲಾದ ಕ್ರ.ಸಂ.(3)ರ ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಪತ್ರದಲ್ಲಿ ನೌಕರರು ದಿನಾಂಕ: 24.4.2004 ರಂದು ಸ್ವೀಕರಿಸಿರುವ ಸ್ವೀಕೃತಿ ಪತ್ರವನ್ನು ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ.(4) ರಲ್ಲಿ ಸದರಿಯವರು ದೋಷಾರೋಪಣಾ ಪಟ್ಟಿಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ನೌಕರರು ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಓದಲಾದ ಕ್ರ.ಸಂ.(5) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ಇವರು ಸದರಿ ನೌಕರರು ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ಕಛೇರಿಯ ಅಧೀಕ್ಷಕರ ಹುದ್ದೆಗೆ ನೇಮಿಸಿದ ನಂತರ ಅವರು ಹಾಜರಾಗಿರುವುದಿಲ್ಲವೆಂದು ಮಾಹಿತಿ ಸಲ್ಲಿಸಿರುತ್ತಾರೆ. ನೌಕರರು ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿರುವುದರಿಂದ ಓದಲಾದ ಕ್ರ.ಸಂ.(6) ರಲ್ಲಿ ಶ್ರೀ ಕೆ. ಈಶ್ವರ ಭಟ್, ನಿವೃತ್ತ ಜಿಲ್ಲಾ ಮತ್ತು ಸೇಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ಇವರನ್ನು ಈ ಪ್ರಕರಣದ ವಿಚಾರಣೆ ನಡೆಸುವ ಸಲುವಾಗಿ ವಿಚಾರಣಾಧಿಕಾರಿಗಳು, ಬೆಂಗಳೂರು ಇವರನ್ನು ಈ ಪ್ರಕರಣದ ವಿಚಾರಣೆ ನಡೆಸುವ ಸಲುವಾಗಿ ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿಗಳು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಓದಲಾದ ಕ್ರ.ಸಂ.(7) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರು ಇಲಾಖಾ ಆದೇಶ ದಿನಾಂಕ: 24.8.2004 ನ್ನು ಜಾರಿ ಮಾಡಿ ಅವರಿಂದ ಸ್ವೀಕೃತಿ ಪಡೆದು ಇಲಾಖೆಗೆ ಸಲ್ಲಿಸಿರುತ್ತಾರೆ.

ಓದಲಾದ ಕ್ರ.ಸಂ.(8) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಅವರ ವಿರುದ್ಧದ ಅನಧಿಕೃತ ಗೈರು ಹಾಜರಿಯ ಆರೋಪವು ಸಾಬೀತಾಗಿರುವುದು ದೃಢಪಟ್ಟಿರುವುದರಿಂದ ವಿಚಾರಣಾ ವರದಿಯ ಪ್ರತಿಯನ್ನು ಹಾಗೂ ಓದಲಾದ ಕ್ರ.ಸಂ.(9) ರಲ್ಲಿ 2ನೇ ಕರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಹಾಗೂ ವಿಚಾರಣಾ ವರದಿಯನ್ನು ಓದಲಾದ ಕ್ರ.ಸಂ.(10) ರಲ್ಲಿ ನೌಕರರಿಗೆ ಜಾರಿ ಮಾಡಿ ಅವರಿಂದ ಸ್ವೀಕೃತಿ ಪಡೆದು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ.(11) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಬೀದರ್ ಇವರ ಮೂಲಕ ಸದರಿ ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅವರ ಹೇಳಿಕೆಯಲ್ಲಿ ಅವರು ವೈಯಕ್ತಿಕ ಅನಿವಾರ್ಯ ಕಾರಣಗಳಿಂದ ದಿನಾಂಕ: 11.3.89 ರಂದು ಅವರ ಕೆಲಸಕ್ಕೆ ರಾಜೀನಾಮೆ ಪತ್ರ ನೀಡಿದ್ದೆ. ಸದರಿ ರಾಜೀನಾಮೆಯು ಅಂಗೀಕೃತವಾಗಿರಬಹುದೆಂದು ಭಾವಿಸಿ ಅವರು ಕಛೇರಿ ಕೆಲಸಕ್ಕೆ ಹಾಜರಾಗಲಿಲ್ಲವೆಂದು ಹಾಗೂ ಗೃಹ ನಿರ್ಮಾಣದ ಪೂರ್ತಿ ಹಣ ತುಂಬುವವರೆಗೆ ರಾಜೀನಾಮೆ ಅಂಗೀಕೃತವಾಗುವುದಿಲ್ಲವೆಂದು ತಿಳಿಸಿರುವ ಪ್ರಯುಕ್ತ ಅವರು ಸಂಪೂರ್ಣ ಗೃಹ ನಿರ್ಮಾಣದ ಮುಂಗಡದ ಹಣವನ್ನು ದಿನಾಂಕ: 29.2.2002 ರಲ್ಲಿ ತುಂಬಿದ್ದೇನೆ. ಹೀಗಾಗಿ ನನ್ನ ಹೆಸರಿನ ಮೇಲೆ ಯಾವುದೇ ಬಾಕಿ ಇರುವುದಿಲ್ಲ. ಆದ್ದರಿಂದ ದಯಮಾಡಿ ದಿನಾಂಕ: 24.4.89 ರಿಂದ 29.3.2003 ರವರೆಗಿನ ಅನಧಿಕೃತ ಗೈರು ಹಾಜರಿ ಅವಧಿಯನ್ನು ಅವರ ಹಕ್ಕಿನಲ್ಲಿರುವ ಯಾವುದೇ ರಜೆಯನ್ನು ಮಂಜೂರು ಮಾಡಿ ಈ ಅವಧಿಯನ್ನು ಸಕ್ರಮಗೊಳಿಸಲು ವಿನಂತಿಸಿರುತ್ತಾರೆ. ದಯವಿಟ್ಟು ಇದೊಂದು ಸಲ ಮನ್ನಿಸಿ ಅವರಿಗೆ ಇಲಾಖೆಯ ಅಧೀನದಲ್ಲಿ ಕೆಲಸ ನಿರ್ವಹಿಸಲು ಸದಾವಕಾಶ ಒದಗಿಸಿಕೊಡಲು ವಿನಂತಿಸಿರುತ್ತಾರೆ.

ಓದಲಾದ ಕ್ರ.ಸಂ. (12) ರಲ್ಲಿ ಸದರಿ ನೌಕರರು ಇಲಾಖೆಗೆ ಮನವಿ ಸಲ್ಲಿಸಿ ಸಹಾಯಕ ಕೃಷಿ ನಿರ್ದೇಶಕರು, ಬಾದಾಮಿ ಕಛೇರಿಗೆ ನೇಮಕ ಮಾಡಿದ್ದ ಪ್ರಯುಕ್ತ ಅಲ್ಲಿಗೆ ಹಾಜರಾಗಲು ಆಗಲಿಲ್ಲ ಎಂದು ತಿಳಿಸುತ್ತಾ ಸಹಾಯಕ ಕೃಷಿ ನಿರ್ದೇಶಕರು, ಭಾಲ್ಕಿಯಲ್ಲಿ ಖಾಲಿ ಇರುವ ಅಧೀಕ್ಷಕರ ಹುದ್ದೆಗೆ ನೇಮಕ ಮಾಡಿ ಮರು ಆದೇಶ ಹೊರಡಿಸಲು ವಿನಂತಿಸಿರುತ್ತಾರೆ. ಓದಲಾದ ಕ್ರ.ಸಂ.(13) ರಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ಇವರಿಗೆ ನೌಕರರು ಚುನಾವಣೆಯಲ್ಲಿ ಸ್ಪರ್ಧಿಸಿದ್ದರ ಬಗ್ಗೆ ಮಾಹಿತಿ ಒದಗಿಸಲು ಕೋರಲಾಗಿದೆ. ಓದಲಾದ ಕ್ರ.ಸಂ.(14) ರಲ್ಲಿ ನೌಕರರ ಮನವಿ ದಿನಾಂಕ: 24.2.2005 ರಲ್ಲಿನ ಮನವಿಯನ್ನು ಪರಿಗಣಿಸಿ ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು ಇವರಿಗೆ ಸಹಾಯಕ ಕೃಷಿ ನಿರ್ದೇಶಕರು, ಭಾಲ್ಕಿ ಕಛೇರಿಯಲ್ಲಿ ಖಾಲಿ ಇರುವ ಅಧೀಕ್ಷಕರ ಹುದ್ದೆಗೆ ಮರು ನೇಮಕ ಮಾಡಿ ಆದೇಶಿಸಲಾಯಿತು. ನಂತರ ಓದಲಾದ ಕ್ರ.ಸಂ.(15) ರಲ್ಲಿ ಸದರಿ ನೌಕರರು ಇಲಾಖೆಗೆ ಮನವಿ ಸಲ್ಲಿಸಿ ದಿನಾಂಕ: 11.3.1989 ರಿಂದ 20.4.2005 ಅವಧಿಯನ್ನು ಸಕ್ರಮಗೊಳಿಸಲು ಹಾಗೂ ಅವರ ವಿರುದ್ಧದ ಶಿಸ್ತುಕ್ರಮ ಕೈಬಿಡಲು ಮತ್ತು ಅಧೀಕ್ಷಕರ ಹುದ್ದೆಯಿಂದ ಆಡಳಿತ ಸಹಾಯಕರ ಹುದ್ದೆಗೆ ಬಡ್ತಿ ನೀಡಲು ವಿನಂತಿಸಿರುತ್ತಾರೆ. ನಂತರ ನೌಕರರು ಕೆ.ಎ.ಟಿ.ಗೆ ಅರ್ಜಿ ಸಲ್ಲಿಸಿ ಅಂತಿಮ ಆದೇಶ ಹೊರಡಿಸಿಲ್ಲದಿರುವ ಬಗ್ಗೆ ಪ್ರಶ್ನಿಸಿರುತ್ತಾರೆ. ಓದಲಾದ ಕ್ರ.ಸಂ.(16) ರಲ್ಲಿ ಕೆ.ಎ.ಟಿ. ಎಮರ್ಜೆಂಟ್ ನೋಟೀಸ್ ದಿನಾಂಕ: 20.1.2006ಕ್ಕೆ ಕಂಡಿಕೆವಾರು ಉತ್ತರ ನೀಡಲು ಸೂಚಿಸಿರುತ್ತಾರೆ. ಓದಲಾದ ಕ್ರ.ಸಂ.(17) ರಲ್ಲಿ ಇಲಾಖೆಯಿಂದ ಅರೆ ಸರ್ಕಾರಿ ಪತ್ರವನ್ನು ಜಿಲ್ಲಾಧಿಕಾರಿಗಳು, ಬೀದರ್ ಇವರಿಗೆ ಬರೆದು ಈಗಾಗಲೇ ಕೋರಿದ್ದ ಮಾಹಿತಿಯನ್ನು ಅಂದರೆ ಸದರಿ ನೌಕರರು ಚುನಾವಣೆಯಲ್ಲಿ ಸ್ಪರ್ಧಿಸಿದ್ದರ ಬಗ್ಗೆ ಮಾಹಿತಿ ಒದಗಿಸಲು ಕೋರಲಾಯಿತು. ಓದಲಾದ ಕ್ರ.ಸಂ.(18) ರಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ಇವರು ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರು ನವೆಂಬರ್ 1989 ರಲ್ಲಿ ನಡೆದ 4-ವಿಧಾನ ಸಭಾ ಚುನಾವಣೆಗೆ

ಸ್ಪರ್ಧಿಸಿದ ಬಗ್ಗೆ ಮಾಹಿತಿಯನ್ನು ಸಲ್ಲಿಸಲು ಕೋರಿರುವಂತೆ ಸದರಿ ಮಾಹಿತಿಯನ್ನು ಸಲ್ಲಿಸಲು ಬೀದರ್ ತಹಶೀಲ್ದಾರ್ ರವರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಅದರಂತೆ ತಹಶೀಲ್ದಾರ್, ಬೀದರ್ ರವರು ಚುನಾವಣೆಯ ಸಂಕಲದಲ್ಲಿನ ಸಂಬಂಧಪಟ್ಟ ಕಾಗದ ಪತ್ರಗಳು ಅವಧಿ ಮೀರಿದ ಪೇಪರ್‌ಗಳು ಎಂದು ವಿಲೇ ಮಾಡಲಾಗಿದೆ. ಸದರಿಯವರ ಬಗ್ಗೆ ಮಾಹಿತಿಯು ಲಭ್ಯವಿರುವುದಿಲ್ಲವೆಂದು ತಹಶೀಲ್ದಾರ್ ರವರು ವರದಿಯನ್ನು ಸಲ್ಲಿಸಿರುತ್ತರೆ.

ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್ ಇವರ ವಿರುದ್ಧ ಮೊದಲ ಆರೋಪವಾದ ಅನಧಿಕೃತ ಗೈರು ಹಾಜರಿಯ ಆರೋಪವು ಸಾಬೀತಾಗಿರುತ್ತದೆ. ಎರಡನೇ ಆರೋಪವಾದ ಚುನಾವಣೆಯಲ್ಲಿ ಸ್ಪರ್ಧಿಸಿರುವ ಬಗ್ಗೆಯ ಆರೋಪವು ಸಾಬೀತಾಗಿರುವುದಿಲ್ಲ ಎಂಬುದಾಗಿ ಓದಲಾದ ಕ್ರ.ಸಂ.(8)ರ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ನೌಕರರನ್ನು ಆರೋಪಿ ಎಂದು ಪರಿಗಣಿಸಿ ನೌಕರರಿಗೆ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:22:2002-03, ದಿನಾಂಕ: 13ನೇ ಮಾರ್ಚ್ 2006**

ಈ ಕೆಳಗೆ ಸಹಿ ಮಾಡಿರುವ ಜಿ. ಪ್ರಕಾಶ್, ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಕಾರಣಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಇವರ ವಿರುದ್ಧ ಅನಧಿಕೃತ ಗೈರು ಹಾಜರಿಯ ಆರೋಪವು ಸಾಬೀತಾಗಿರುವುದರಿಂದ ಇವರನ್ನು ಆರೋಪಿ ಎಂದು ಪರಿಗಣಿಸಿ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿರುತ್ತೇನೆ.

ಶ್ರೀ ಸೂರ್ಯವಂಶಿ ವೈಜನಾಥರಾವ್, ಹಿಂದಿನ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೀದರ್, ಹಾಲಿ ಅಧೀಕ್ಷಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಭಾಲ್ಕಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 1957ರ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8(vi)ರ ಅಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುತ್ತೇನೆ.

ಸದರಿ ನೌಕರರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಅನಧಿಕೃತ ಗೈರು ಹಾಜರಿ ಅವಧಿ ಎಂದು ಪರಿಗಣಿಸಲು ಆದೇಶಿಸಿರುತ್ತೇನೆ.

ಪಿ.ಆರ್. 609 ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಅಧಿಸೂಚನೆ ನಂ. ಎಲ್‌ಆರ್‌ಎಫ್ (ಕಲಂ 109) ಸಿಆರ್–14:2005–06, ದಿನಾಂಕ: 7ನೇ ಮಾರ್ಚ್ 2006**

ಕೋಲಾರ ತಾಲ್ಲೂಕು ನರಸಾಪುರ ಹೋಬಳಿ ಬೆಳ್ಳೂರು ಗ್ರಾಮದ ಸ.ನಂ.361 ರಲ್ಲಿ 2–08 ಎಕರೆ ಸ.ನಂ.365/1 ರಲ್ಲಿ 2–36 ಎಕರೆ ಮತ್ತು ಸ.ನಂ.365/2 ರಲ್ಲಿ 3–14 ಎಕರೆ ಹೀಗೆ ಒಟ್ಟು 8–18 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಬೆಳ್ಳೂರು ಕೃಷ್ಣಮಾಚಾರಿ ಮತ್ತು ಶೇಷಮ್ಮ ಸ್ಮಾರಕ ನಿಧಿ ಟ್ರಸ್ಟ್ (ರಿ) ಕುಮಾರಸ್ವಾಮಿ ಲೇಔಟ್ ಬೆಂಗಳೂರು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ತಹಶೀಲ್ದಾರ್ ಕೋಲಾರ ತಾಲ್ಲೂಕು ರವರು ಪತ್ರ ಸಂಖ್ಯೆ ಎಲ್‌ಆರ್‌ಎಫ್ ಸಿಆರ್ 71/2005–06, ದಿನಾಂಕ: 18.02.2006 ರಂತೆ ಕಡತ ತಯಾರಿಸಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪವಿಭಾಗ ರವರು ಪರಿಶೀಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಅನುಮತಿಯನ್ನು ನೀಡಲು ವರದಿ ಸಂಖ್ಯೆ: ಎಲ್‌ಆರ್‌ಎಫ್.ಸಿಆರ್ 31:95–96, ದಿನಾಂಕ: 2.3.2006 ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಕೋಲಾರ ತಾಲ್ಲೂಕು ನರಸಾಪುರ ಹೋಬಳಿ ಬೆಳ್ಳೂರು ಗ್ರಾಮದ ಸ.ನಂ.361 ರ 2–08 ಎಕರೆ ಮತ್ತು ಸ.ನಂ.365/1 ರ 2–36 ಗುಂಟೆ ಜಮೀನು ಕ್ರಮವಾಗಿ ತಿರುಮಳಮ್ಮ ಬಿನ್ ಗುಂಡಪ್ಪ ಮತ್ತು ಮುನಿರಾಜು ಬಿನ್ ಗುಂಡಪ್ಪ ಎಂಬುವವರ ಹೆಸರಿಗೆ ತಲಾ 1/2 ಹಿಸ್ಸೆಯಂತೆ ಖಾತೆ ಇದ್ದು ಈ ಜಮೀನು ಇವರುಗಳಿಗೆ ಫವತಿವಾರ್ಸ್ ಮೂಲಕ ಬಂದಿರುತ್ತೆ. ಸ.ನಂ.365/2 ರ 3–09 ಎಕರೆ ಜಮೀನು ಬಿ.ಆರ್. ವೇಣುಗೋಪಾಲ್ ಬಿನ್ ಲೇಟ್ ಬಿ.ಸಿ. ರಾಮಯ್ಯ ಮತ್ತು ಎಸ್.ಎ. ಬಾಬುರೆಡ್ಡಿ ಬಿನ್ ಎಸ್.ವಿ. ಅಣ್ಣಯ್ಯರೆಡ್ಡಿ ಎಂಬುವವರ ಹೆಸರಿನಲ್ಲಿ ಜಂಟಿ ಖಾತೆ ಇದ್ದು ಈ ಜಮೀನು ಇವರಿಗೆ ಕ್ರಯದ ಮೂಲಕ ಬಂದಿರುತ್ತೆ. ಮೇಲ್ಕಂಡ ಜಮೀನುಗಳನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಮೇಲ್ಕಂಡ ಭೂ ಮಾಲೀಕರು ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಪ್ರಸ್ತಾಪಿತ ಜಮೀನುಗಳು ಹಿಡುವಳಿ ಜಮೀನುಗಳಾಗಿರುತ್ತೆ. ಈ ಜಮೀನುಗಳು ಭೂ ಮಂಜೂರಾತಿ ನಿಯಮ/ಕರ್ನಾಟಕ ಭೂ ಸುಧಾರಣೆ ಕಾಯ್ದೆ/ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರು ಗೇಣಿ ಅರ್ಜಿಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಪ್ರಸ್ತಾಪಿತ ಜಮೀನುಗಳು ಯಾರಿಗೂ ಪರಭಾರೆಯಾಗಿರುವುದಿಲ್ಲ.

ಬೆಳ್ಳೂರು ಕೃಷ್ಣಮಾಚಾರಿ ಮತ್ತು ಶೇಷಮ್ಮ ಸ್ಮಾರಕ ನಿಧಿ ಟ್ರಸ್ಟ್ (ರಿ), ಉಪ ನೋಂದಣಾಧಿಕಾರಿಗಳು ಬಸವನಗುಡಿ ಬೆಂಗಳೂರು ರವರ ಕಛೇರಿಯಲ್ಲಿ ನಂ.209/2002–03 ದಿನಾಂಕ: 6.11.2002 ರಂತೆ ನೋಂದಾವಣೆಯಾಗಿರುತ್ತೆ. ಅರ್ಜಿದಾರರು ಮೇಲ್ಕಂಡ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಉದ್ದೇಶಿಸಿದ್ದು ಟ್ರಸ್ಟ್ ನವರು ಈಗಾಗಲೇ ಪಾಠಶಾಲೆಯನ್ನು ನಡೆಸುತ್ತಿದ್ದು ಸದರಿ ಶಾಲೆಯು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರವರ ಕಛೇರಿಯಲ್ಲಿ ಕ್ರ.ಸಂ.89/2005–06 ದಿನಾಂಕ: 3.5.2005 ರಂತೆ ನೋಂದಾವಣೆಯಾಗಿರುತ್ತೆ. ಅರ್ಜಿದಾರರು ನಮೂನೆ 15ಎ ರೊಂದಿಗೆ ಸಲ್ಲಿಸಿರುವ ದಾಖಲೆಗಳು ಪ್ರಸ್ತಾಪಿತ ಉದ್ದೇಶಕ್ಕೆ ಪೂರಕವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (ii)ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001, ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾದಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ಕ್ಕೆ ಅನುಗುಣವಾಗಿರುವುದರಿಂದ ಕೋಲಾರ ತಾಲ್ಲೂಕು ನರಸಾಪುರ ಹೋಬಳಿ ಬೆಳ್ಳೂರು ಗ್ರಾಮದ ಸ.ನಂ.361

ರಲ್ಲಿ 2–08 ಎಕರೆ ಸ.ನಂ.365/1 ರಲ್ಲಿ 2–36 ಎಕರೆ ಮತ್ತು ಸ.ನಂ.365/2 ರಲ್ಲಿ 3–14 ಎಕರೆ ಹೀಗೆ ಒಟ್ಟು 8–18 ಎಕರೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಬೆಳ್ಳೂರು ಕೃಷ್ಣಮಾಚಾರಿ ಮತ್ತುಶೇಷಮ್ಮ ಸ್ಮಾರಕ ನಿಧಿ ಟ್ರಸ್ಟ್ (ರಿ) ಕುಮಾರಸ್ವಾಮಿ ಲೇ ಔಟ್ ಬೆಂಗಳೂರು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (ii)ರ ಅಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1) ಯಾವ ಉದ್ದೇಶಕ್ಕಾಗಿ ಜಮೀನುಗಳನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2) ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮಿಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ : ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6) ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (ii) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 617 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**ನೀರಾವರಿ ಇಲಾಖೆ (ಸಣ್ಣ ನೀರಾವರಿ)**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ ಗುಣ ನಿಯಂತ್ರಣ ಉಪವಿಭಾಗ, ಧಾರವಾಡ**

**ಕ್ರ.ಸಂ. ಸಕಾನಿಇಂ:ಸನೇಗುಉವಿ:ಧಾ:ಸಿ–1:ಮಾಹಿತಿ:2005–06, ದಿನಾಂಕ: 4ನೇ ಮಾರ್ಚ್ 2006**

**1) ರಚನೆ ಕಾರ್ಯಗಳು ಹಾಗೂ ಕರ್ತವ್ಯಗಳು:**

ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪೂರ ಅಡಿಯಲ್ಲಿ ನಿರ್ಮಾಣಗೊಳ್ಳುತ್ತಿರುವ ಸಣ್ಣ ನೀರಾವರಿ ಕೆರೆ ಕಾಮಗಾರಿ, ಬ್ಯಾರೇಜ್ ಹಾಗೂ ಏತ ನೀರಾವರಿಗಳ ನಿರ್ಮಾಣ ಹಂತಗಳಲ್ಲಿ ಅವುಗಳಿಗೆ ಉಪಯೋಗಿಸುವ ಸಾಮಗ್ರಿಗಳ ಗುಣ ನಿಯಂತ್ರಣ ಕೆಲಸ ನಿರ್ವಹಿಸುವುದು ಈ ನಿರ್ವಹಣೆಗಾಗಿ ಧಾರವಾಡ, ಹಾವೇರಿ, ಗದಗ್, ಕಾರವಾರ ಮತ್ತು ಉತ್ತರ ಕನ್ನಡ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ, ಧಾರವಾಡ, ರಾಣಿಬೆನ್ನೂರ್, ಶಿರಹಟ್ಟಿ, ಕಾರವಾರ ಮತ್ತು ಸಿರ್ಸಿ ಕಾಮಗಾರಿ ಉಪ ವಿಭಾಗಗಳ ಅಡಿಯಲ್ಲಿ ನಿರ್ವಹಿಸುತ್ತಿರುವ ಕೆಲಸಗಳ ಗುಣನಿಯಂತ್ರಣ ಕಾರ್ಯಗಳನ್ನು ಕೈಗೊಳ್ಳುವುದು, ಗುಣ ನಿಯಂತ್ರಣದ ಮುಖ್ಯ ಪ್ರಯೋಗಾಲಯದ ಧಾರವಾಡದಲ್ಲಿಯೇ ಇರುತ್ತದೆ. ಹಾಗೂ ಇದರ ಅಡಿಯಲ್ಲಿ ಎರಡು ಕ್ಷೇತ್ರ ಪ್ರಯೋಗಾಲಯಗಳು ಹಾವೇರಿ ಮತ್ತು ಸಿರ್ಸಿಯಲ್ಲಿ ಇರುತ್ತವೆ. ಪ್ರಸ್ತುತ ಈ ಉಪ ವಿಭಾಗದ ಮುಖ್ಯಾಸ್ಥರಾದ ಶ್ರೀ ಎನ್.ಎಫ್. ಜಾನ್ವೇಕರ್ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಅಡಿಯಲ್ಲಿ 3 ಸಹಾಯಕ ಇಂಜಿನೀಯರ್ (3 ಹುದ್ದೆ ಖಾಲಿ ಇರುತ್ತದೆ). ಒಬ್ಬ ದ್ವಿತೀಯ ದರ್ಜೆ ಸಹಾಯಕ, ಒಬ್ಬ ವಾಹನ ಚಾಲಕ, ಇಬ್ಬರು ಸಿಪಾಯಿಗಳು ಅಲ್ಲದೇ 2 ಜನ ದ್ವಿತೀಯ ದರ್ಜೆ ಸಹಾಯಕರು 1 ಜನ ವಾಹನ ಚಾಲಕ ಹಾಗೂ 1 ಕಾವಲುಗಾರ ಸೂಪರನ್ಯೂಮರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

**2) ಕರ್ತವ್ಯ ನಿರ್ವಹಣೆ ಮಾರ್ಗ ಸೂಚಿ:**

ಈ ಗುಣ ನಿಯಂತ್ರಣ ನಿರ್ವಹಿಸಲು ಕರ್ನಾಟಕ ಸರ್ಕಾರ ಸಣ್ಣ ನೀರಾವರಿ ಇಲಾಖೆ ನೀಡಿರುವ ಮಾರ್ಗದರ್ಶಿಯಲ್ಲಿ ಕೆರೆಗಳ ವಿನ್ಯಾಸಕ್ಕಾಗಿ ಮಣ್ಣು ಮಾದರಿಗಳ ಪರೀಕ್ಷೆಗಳನ್ನು ನಡೆಸುವುದು ಕಾಮಗಾರಿ ಪ್ರಗತಿಯಲ್ಲಿದ್ದಾಗ ಅದಕ್ಕೆ ಉಪಯೋಗಿಸುವ ಮಣ್ಣು ಸಮರ್ಪಕವೋ ಹೇಗೆ ಎಂಬುದನ್ನು ಪರೀಕ್ಷಿಸುವುದು, ಅಲ್ಲದೇ ಕಾಂಕ್ರೀಟ್ ಹಾಗೂ ಗಾರೆ ಕೆಲಸಗಳಲ್ಲಿ ಉಪಯೋಗಿಸುವ ಖಡಿ, ಉಸುಕು ಮತ್ತು ಸಿಮೆಂಟ್‌ಗಳ ಪರೀಕ್ಷೆ ಕೈಗೊಳ್ಳುವುದು ಈ ಎಲ್ಲ ಪರೀಕ್ಷೆಗಳ ಫಲಿತಾಂಶಗಳನ್ನು ಕಾಮಗಾರಿ ಉಪ ವಿಭಾಗ, ವಿಭಾಗಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ಕಳಿಸುವುದು ಇತ್ಯಾದಿ.

4) ಈ ಕಛೇರಿಗೆ ಸಂಬಂಧಪಟ್ಟ ಮಾಹಿತಿ ಪಡೆಯಲು ಸಂಪರ್ಕಿಸಬೇಕಾದ ಅಧಿಕಾರಿ ವಿವರಗಳನ್ನು ಈ ಕಛೇರಿಯ ಅಧಿಸೂಚನಾ ಪತ್ರ ಸಂಖ್ಯೆ 405 ದಿನಾಂಕ: 10.1.2006 ಮೂಲಕ ಪ್ರಕಟಿಸಲಾಗಿದೆ.

5) ಈ ಉಪ ವಿಭಾಗದ ಅಡಿಯಲ್ಲಿನ ಅಧಿಕಾರಿಗಳ ಹಾಗೂ ಸಿಬ್ಬಂದಿಯ ವಿವರಗಳುಳ್ಳ ಫಲಕ ಪ್ರಕಟಿಸಲಾಗಿದೆ.

6) ಅಧಿಕಾರಿ ಹಾಗೂ ಸಿಬ್ಬಂದಿಯ ವೇತನದ ವಿವರ ಪ್ರಕಟಿಸಿದೆ.

7) 2005 ನೇ ಮಾಹಿತಿ ಹಕ್ಕು ಅಧಿನಿಯಮ (ಕೇಂದ್ರ ಅಧಿನಿಯಮ ಸಂಖ್ಯೆ 22:2005)ರ ಸೆಕ್ಷನ್–27ರ ಉಪಬಂಧ (1) ಮತ್ತು (2)ರ ಅಡಿಯಲ್ಲಿ ಈ ಉಪ ವಿಭಾಗ ಕಛೇರಿಗೆ ಸಂಬಂಧಿಸಿದ ಅಧಿಕಾರಿಗಳ ವಿವರ.

| ಕ್ರ. ಸಂ. | ಅಧಿಕಾರಿಯ ಹೆಸರು ಹಾಗೂ ಪದನಾಮ | ಕರ್ತವ್ಯ | ದೂರವಾಣಿ ಸಂಖ್ಯೆ (ಕಛೇರಿ) |
|---|---|---|---|
| 1 | ಶ್ರೀ ಎನ್.ಎಫ್. ಜಾನ್ವೇಕರ್, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ | ಸಕ್ಷಮ ಅಧಿಕಾರಿ | 0836–2442079 |
| 2 | ಶ್ರೀ ಎ.ಆರ್. ಬಲರಾಮಸಿಂಗ್ ಸಹಾಯಕ ಇಂಜಿನೀಯರ್ | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ | 0836–2442079 |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಿಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಪಿ.ಆರ್. 618 ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ ವಿಭಾಗ, ಧಾರವಾಡ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಲ್ಲರ್ಗಿ ತಾ: ಬೀದರ,** ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005–06, ದಿನಾಂಕ: 21/25.10.2005
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/2005–2006, ದಿನಾಂಕ: 28.02.2006.

**ಪ್ರಸ್ತಾವನೆ:**

**ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಲ್ಲರ್ಗಿ ತಾ: ಬೀದರ,** ಈ ಸಂಘವು ಸಂಖ್ಯೆ: ಸನಿಬಿ1/ವಿ4/18313/ 1983–84, ದಿನಾಂಕ: 01.02.1984, ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಸಂಘಗಳ ನಿರೀಕ್ಷಕರು, ಬೀದರ ತಾಲ್ಲೂಕ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2)ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರು ಸಂಘದಲ್ಲಿ ಯಾವುದೇ ಆಸ್ತಿ–ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006, ದಿನಾಂಕ: 28ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆಯ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿಲ್ಲರ್ಗಿ ತಾ: ಬೀದರ,** ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/18313/ 1983–84, ದಿನಾಂಕ: 01.02.1984, ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 28.02.2006 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 619 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ **ವಿಜಯ ಪತ್ತಿನ ಸಹಕಾರ ಸಂಘ ನಿ., ಕೊಹಿನೂರ ತಾ: ಬಸವಕಲ್ಯಾಣ** ಇದನ್ನು ಸಹಕಾರ ಕಾಯ್ದೆ 1959ರ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್–/2005–2006/3193, ದಿನಾಂಕ: 28.2.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೋಂದಣಿ ಸಂಖ್ಯೆ: ಸನಿಬಿ1/ವಿ4/ಯುಬಿಸಿ/ ಯುಬಿಎ/32428/2002–2003, ದಿನಾಂಕ: 4.4.2002 ರಲ್ಲಿ ನೋಂದಣಿ **ವಿಜಯ ಪತ್ತಿನ ಸಹಕಾರ ಸಂಘ ನಿ., ಕೊಹಿನೂರ ತಾ: ಬಸವಕಲ್ಯಾಣ** ಈ ಸಂಘವು ಸುಮಾರು..... ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ

ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4256, ದಿನಾಂಕ: 8ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸ್ಥಗಿತಗೊಂಡ **ವಿಜಯ ಪತ್ತಿನ ಸಹಕಾರ ಸಂಘ ನಿ., ಕೊಹಿನೂರ ತಾ: ಬಸವಕಲ್ಯಾಣ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ಧತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 08.03.2006 ರಂದು ಹೊರಡಿಸಲಾಗಿದೆ.

ಪಿ.ಆರ್. 620 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ **ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ,** ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005–06, ದಿನಾಂಕ: 21/25.10.2005

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/2005–2006, ದಿನಾಂಕ: 28.02.2006.

**ಪ್ರಸ್ತಾವನೆ:**

**ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ,** ಈ ಸಂಘವು ಸಂಖ್ಯೆ: ಸನಿಬಿ1/ವಿ9/ಜಿಓಜಿ/23241/1995–96, ದಿನಾಂಕ: 27.02.1996, ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಸಂಘಗಳ ನಿರೀಕ್ಷಕರು, ಬೀದರ ತಾಲ್ಲೂಕ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2)ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರು ಸಂಘದಲ್ಲಿ ಯಾವುದೇ ಆಸ್ತಿ–ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4267, ದಿನಾಂಕ: 28ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ **ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ,** ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ9/ಜೆಓಜಿ/23241/1995–96, ದಿನಾಂಕ: 27.02.1996, ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೆನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 28.02.2006 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 621 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ **ಆಟೋ ಅರ್ಕರ್ಸ್ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಇದನ್ನು ಸಹಕಾರ ಕಾಯ್ದೆ 1959ರ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್–/2005–2006/3192, ದಿನಾಂಕ: 02.3.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೋಂದಣಿ ಸಂಖ್ಯೆ: ಎಆರ್1/ಎಸ್4/ಆರ್‌ಜಿಎನ್/23253/1995–96, ದಿನಾಂಕ: 17.10.96 ರಲ್ಲಿ ನೋಂದಣಿ **ಆಟೋ ಅರ್ಕರ್ಸ್ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಈ ಸಂಘವು ಸುಮಾರು..... ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4279, ದಿನಾಂಕ: 08ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸ್ಥಗಿತಗೊಂಡ **ಆಟೋ ಅರ್ಕರ್ಸ್ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ಧತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 08.03.2006 ರಂದು ಹೊರಡಿಸಲಾಗಿದೆ.

ಪಿ.ಆರ್. 622 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ **ಹರಿಜನ/ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ** ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005–06, ದಿನಾಂಕ: 02.11.2005

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/2005–2006, ದಿನಾಂಕ: 24.02.2006.

**ಪ್ರಸ್ತಾವನೆ:**

**ಹರಿಜನ/ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ** ಈ ಸಂಘವು ಸಂಖ್ಯೆ: ಸನಿಬಿ1/ವಿ4/18354/1995–96, ದಿನಾಂಕ: 06.08.1996, ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2)ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರು ಸಂಘದಲ್ಲಿ ಯಾವುದೇ ಆಸ್ತಿ–ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4198, ದಿನಾಂಕ: 25ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆಯ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/200, ದಿನಾಂಕ: 21.11.2001 ರಲ್ಲಿ ದತ್ತವಾಗಿರುವ

ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ **ಹರಿಜನ/ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ** ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/18354/1995-96, ದಿನಾಂಕ: 06.08.1996 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 25.02.2006 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 623 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ **ಪ:ಜಾ/ಪ:ಪಂ ಗ್ರಾಹಕರ ಸಹಕಾರ ಸಂಘ ನಿ., ಔರಾದ (ಬಿ) ತಾ: ಔರಾದ (ಬಿ)** ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್/2005-06, ದಿನಾಂಕ: 20.09.2005

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/2005-2006, ದಿನಾಂಕ: 23.02.2006.

**ಪ್ರಸ್ತಾವನೆ:**

**ಪ:ಜಾ/ಪ:ಪಂ ಗ್ರಾಹಕರ ಸಹಕಾರ ಸಂಘ ನಿ., ಔರಾದ (ಬಿ) ತಾ: ಔರಾದ (ಬಿ)** ಈ ಸಂಘವು ಸಂಖ್ಯೆ: ಸನಿಬಿ1/ವಿ4/ಆರ್‌ಜಿಎನ್/23254/1996-97, ದಿನಾಂಕ: 08.11.1996, ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2)ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರು ಸಂಘದಲ್ಲಿ ಯಾವುದೇ ಆಸ್ತಿ-ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೋಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್- /2005-2006/4201, ದಿನಾಂಕ: 2ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆಯ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/200, ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ **ಪ:ಜಾ/ಪ:ಪಂ ಗ್ರಾಹಕರ ಸಹಕಾರ ಸಂಘ ನಿ., ಔರಾದ (ಬಿ) ತಾ: ಔರಾದ (ಬಿ)** ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/ಆರ್‌ಜಿಎನ್/23254/1996-97, ದಿನಾಂಕ: 08.11.1996, ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 02.03.2006 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 624 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ **ಬಳವಂತರಾವ ವರಾಳೆ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ ತಾ:ಹುಮನಾಬಾದ** ಇದನ್ನು ಸಹಕಾರ ಕಾಯ್ದೆ 1959ರ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006/3195, ದಿನಾಂಕ: 28.2.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೋಂದಣಿ ಸಂಖ್ಯೆ: ಸನಿಬಿ1/ವಿ4/ಎಓಜೆ/18347/1995-96, ದಿನಾಂಕ: 12.05.1995 ರಲ್ಲಿ ನೋಂದಣಿ **ಬಳವಂತರಾವ ವರಾಳೆ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ**

**ನಿ., ಹುಮನಾಬಾದ ತಾ:ಹುಮನಾಬಾದ** ಈ ಸಂಘವು ಸುಮಾರು..... ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4285, ದಿನಾಂಕ: 8ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸ್ಥಗಿತಗೊಂಡ **ಬಳವಂತರಾವ ವರಾಳೆ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ ತಾ:ಹುಮನಾಬಾದ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ಧತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 08.03.2006 ರಂದು ಹೊರಡಿಸಲಾಗಿದೆ.

ಪಿ.ಆರ್. 625 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ **ಸರಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್–/2005–2006, ದಿನಾಂಕ: 25.2.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೋಂದಣಿ ಸಂಖ್ಯೆ: ಎಆರ್‌ಬಿ/1955/1971–72, ದಿನಾಂಕ: 25.02.1972 ರಲ್ಲಿ ನೋಂದಣಿ **ಸರಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಈ ಸಂಘವು ಸುಮಾರು 4 ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್– /2005–2006/4121, ದಿನಾಂಕ: 2ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸ್ಥಗಿತಗೊಂಡ **ಸರಕಾರಿ ನೌಕರರ ಗೃಹ ನಿರ್ಮಾಣ ಸಹಕರ ಸಂಘ ನಿ., ಬಸವಕಲ್ಯಾಣ ತಾ: ಬಸವಕಲ್ಯಾಣ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ಧತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 02.03.2006 ರಂದು ಹೊರಡಿಸಲಾಗಿದೆ.

ಪಿ.ಆರ್. 626 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:405:2005-06/2036, ದಿನಾಂಕ: 8ನೇ ಫೆಬ್ರವರಿ 2006**

**ವಿಷಯ:** ಸಮಾಪನಾ ಆದೇಶಿತ ಹಮ್‌ದರ್ದ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:188:05-06, ದಿನಾಂಕ: 16.11.2005.

2) ಸಮಾಪನಾಧಿಕಾರಿಯವರ ಪತ್ರ ಸಂಖ್ಯೆ: ಸಅಅ:ಹೊ:63:ಸಮಾಪನೆ:2005-06, ದಿನಾಂಕ: 23.1.2006.

ಹಮ್‌ದರ್ದ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು, ಈ ಸಹಕಾರ ಸಂಘವು ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ: ಎಆರ್-24:ಎಂಕೆಟಿ:11907:85-86, ದಿನಾಂಕ: 5.5.86 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ಮಂಡಳಿ ಗ್ರಾಮದ 7 ಸರ್ವೆ ನಂಬರ್‌ಗೆ ಸೀಮಿತವಾಗಿದ್ದು, ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಇರುವುದಾಗಿ ವರದಿ ಮಾಡಿರುತ್ತಾರೆ. ಈ ಸಹಕಾರ ಸಂಘವು ತನ್ನ ಕಾರ್ಯಚರಣೆಯನ್ನು ಸ್ಥಗಿತಗೊಳಿಸಿದ್ದು ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಶ್ರೀ ಮಧುಕರರಾವ್ ಕರಣಂ ಸಹಕಾರ ಅಭಿವೃದ್ಧಿ ಅಧಿಕಾರಿಯವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಲಾಗಿದೆ. ಸಮಾಪನಾಧಿಕಾರಿಯವರು ದಿನಾಂಕ: 16.11.2005 ರಂದು ಪ್ರಭಾರ ವಹಿಸಿಕೊಂಡಿದ್ದು, ಈ ಸಂಘದ ಸದಸ್ಯರಿಗೆ ಷೇರು ಹಂಚಿಕೆ ಮಾಡಿ, ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದ ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿದ ಆರ್ಥಿಕ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ. ಸಮಾಪನಾಧಿಕಾರಿಯವರು ಈ ಸಂಘದ ನೋಂದಣಿ ರದ್ಧತಿ ಮಾಡುವ ಸಂಬಂಧವಾಗಿ ಸದಸ್ಯರಿಂದ ಆಕ್ಷೇಪಣೆ ಇದ್ದಲ್ಲಿ, ಮಾಹಿತಿ ಸಲ್ಲಿಸಲು ತಿಳಿಸಿ, ದಿನಾಂಕ: 3.1.2006ರ "ನಾವಿಕ" ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಣೆಗೊಳಿಸಿ, ಈ ಗಡವು ದಿನಾಂಕ: ಒಳಗಡೆ ಯಾವುದೇ ಆಕ್ಷೇಪಣೆ ಬಂದಿಲ್ಲವೆಂದು ತಿಳಿಸಿ ವರದಿ ಮಾಡಿರುತ್ತಾರೆ. ಸಮಾಪನಾಧಿಕಾರಿಯವರು ಅಂತಿಮ ಸಭೆ ನಡೆಸಿದ್ದು, ನೋಂದಣಿ ರದ್ಧತಿಗಾಗಿ ತೀರ್ಮಾನಿಸಿ ನಡುವಳಿಕೆ ಸಲ್ಲಿಸಿರುತ್ತಾರೆ. ಮತ್ತು ಈ ಸಂಘದಲ್ಲಿ ಸರ್ಕಾರದ ಷೇರು, ಸರ್ಕಾರದ ಸಾಲ ಮತ್ತು ಚರಾಸ್ತಿ-ಸ್ಥಿರಾಸ್ತಿ ಇರುವುದಿಲ್ಲವೆಂದು ವರದಿ ಮಾಡಿ ನೋಂದಣಿ ರದ್ಧತಿಗೆ ಕೋರಿರುತ್ತಾರೆ.

ಸಮಾಪನಾಧಿಕಾರಿಯವರ ವರದಿಯ ಆಧಾರಿತವಾಗಿ, ಈ ಸಂಘದ ಆಸ್ತಿ-ಜವಾಬ್ದಾರಿ ಶೂನ್ಯವಾಗಿದ್ದು, ಚರಾಸ್ತಿ-ಸ್ಥಿರಾಸ್ತಿ ಇಲ್ಲವಿರುವುದರಿಂದ ಮತ್ತು ಸರ್ಕಾರದ ಷೇರು, ಸರ್ಕಾರದ ಸಾಲ ಇಲ್ಲದಿರುವುದರಿಂದ, ಈ ಸಂಘದ ನೋಂದಣಿ ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್‌ಎಂ:2000, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು, ಹಮ್‌ದರ್ದ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು ಇದರ ನೋಂದಣಿ ನಂ.ಸಸಂಸನಿ-24:ಎಂಕೆಟಿ:11907:1985-86, ದಿನಾಂಕ: 5.5.86 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನಾಂಕ: 8.2.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 627 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:402:2005-06/2035, ದಿನಾಂಕ: 16ನೇ ಫೆಬ್ರವರಿ 2006**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗುಳ್ಳದಹಳ್ಳಿ, ಶಿಕಾರಿಪುರ ತಾ: ಇದರ ನೋಂದಣಿ ರದ್ಧತಿ ಬಗ್ಗೆ.

**ಓದಲಾಗಿದೆ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:106:2005-06, ದಿನಾಂಕ: 25.11.2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ರವರ ಪತ್ರ ಸಂಖ್ಯೆ: ಎಆರ್ 25/ಸಮಾಪನೆ/65/2005-06, ದಿನಾಂಕ: 23.01.2006.

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗುಳ್ಳದಹಳ್ಳಿ, ಶಿಕಾರಿಪುರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ಸಂಖ್ಯೆ: ಸಸೊಸನಿ-25/ನೋಂದಣಿ/20159/1994-95, ದಿನಾಂಕ: 25.07.1994 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ

ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಶಿಕಾರಿಪುರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 01.12.2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ಥಿ ಇಲ್ಲವೆಂದು ವರದಿ ಮಾಡಿ ದಿನಾಂಕ: 15.01.2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದವರು ಮಹಾಸಭೆ ನಡೆಸಿ ನೋಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಈ ಸಂಘದಲ್ಲಿ ಸದಸ್ಯತ್ವ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ಇವರ ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2) ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗುಳ್ಳದಹಳ್ಳಿ, ಶಿಕಾರಿಪುರ ತಾ: ಇದರ ನೋಂದಣಿ ನಂ.ಸಸಂಸನಿ-25/ನೋಂದಣಿ/20159/1994-95, ದಿನಾಂಕ: 25.07.1994 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನಾಂಕ: 16.2.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 628 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ನಂ. ಡಿಆರ್ಎಸ್:ಸಮಾಪನೆ:ಡಿಎಲ್ಎಸ್:402:2005-06/3037, ದಿನಾಂಕ: 16ನೇ ಫೆಬ್ರವರಿ 2006**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೇಡರಹೊಸಹಳ್ಳಿ, ಶಿವಮೊಗ್ಗ ತಾ: ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್ಎಸ್:ಸಮಾಪನೆ:ಡಿಎಲ್ಎಸ್:47:2003-04, ದಿನಾಂಕ: 20.05.2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರ ಪತ್ರ ಸಂಖ್ಯೆ: ಎಆರ್ 24/ಸಮಾಪನೆ/73/2005-06, ದಿನಾಂಕ: 25.01.2006.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೇಡರಹೊಸಹಳ್ಳಿ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೋಂದಣಿ ಸಂಖ್ಯೆ: ಸಸೊಸನಿ-24/ನೋಂದಣಿ/1388/1986-87, ದಿನಾಂಕ: 02.11.1986 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ-2, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 25.05.2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ಥಿ ಇಲ್ಲವೆಂದು ವರದಿ ಮಾಡಿ ದಿನಾಂಕ: 20.01.2006 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದವರು ಮಹಾಸಭೆ ನಡೆಸಿ ನೋಂದಣಿ ರದ್ಧತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಈ ಸಂಘದಲ್ಲಿ ಸದಸ್ಯತ್ವ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ಶಿವಮೊಗ್ಗದ ನಿಬಂಧಕರು, ಸಾಗರ, ಇವರ ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2) ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ: 21.11.2001 ರಲ್ಲಿ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ.ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೇಡರಹೊಸಹಳ್ಳಿ, ಶಿವಮೊಗ್ಗ ತಾ: ಇದರ ನೋಂದಣಿ ನಂ.ಸಸಂಸನಿ-24/ನೋಂದಣಿ/1388/1986-87, ದಿನಾಂಕ: 02.11.1986 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನಾಂಕ: 16.2.2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 629 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರ ಕಾರ್ಯಾಲಯ, ಶಿವಮೊಗ್ಗ**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:50-83:2005-06/2142, ದಿನಾಂಕ: 10ನೇ ಫೆಬ್ರವರಿ 2006**

**ವಿಷಯ:** ಶಿವಮೊಗ್ಗ ಜಿಲ್ಲೆಯ ಸಾಗರ ಉಪವಿಭಾಗದ ಸಮಾಪನಾ ಆದೇಶಿತ ಸಣ್ಣನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳ ನೋಂದಣಿ ರದ್ಧತಿ ಕುರಿತು.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:50-83:05-06, ದಿನಾಂಕ: 11.8.2005.

2) ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:...:05-06, ದಿನಾಂಕ: 29.06.2005.

3) ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:21:05-06, ದಿನಾಂಕ: 29.6.2005

4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಶಿಫಾರಸ ಪತ್ರ ಸಂಖ್ಯೆ: ಸನಿ:25: ಸಮಾಪನೆ:ಸಿಆರ್:105,110,107,108,111,104,106,40,116, ದಿನಾಂಕ: 21.1.06, 25.1.06 ಮತ್ತು 6.9.2006 (9 ಪ್ರತ್ಯೇಕ ಪ್ರಸ್ತಾವನೆಗಳು)

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯಲ್ಲಿ ಸಾಗರ ಉಪವಿಭಾಗದಲ್ಲಿ ಸಮಾಪನಾ ಸಣ್ಣನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ರವರ ಕಛೇರಿಯಲ್ಲಿ ನೋಂದಣಿಯಾಗಿದ್ದು, ಪ್ರಾರಂಭದಿಂದಲೂ ತನ್ನ ಕಾರ್ಯವನ್ನು ನಡೆಸದೇ ಸ್ಥಗಿತಗೊಂಡಿರುವ ಪ್ರಯುಕ್ತ ಮತ್ತು ಹೆಚ್ಚಿನ ಈ ಸಹಕಾರ ಸಂಘಗಳು ಸದಸ್ಯರಿಂದ ಸಂಗ್ರಹಿಸಿದ ಷೇರು ಹಣವನ್ನು ಅಮಾನತೆ ಖಾತೆಯಿಂದ ವರ್ಗಾವಣೆಗೆ ಸಹ ಆಸಕ್ತಿ ಇಲ್ಲದಂತಾಗಿ, ಅಮಾನತ್ ಖಾತೆಯಲ್ಲಿ ಹಣ ಇದ್ದು, ಯಾವುದೇ ವ್ಯವಹಾರ ನಡೆಸದ ಪ್ರಯುಕ್ತ ಮತ್ತು ಆಡಳಿತ ಮಂಡಳಿ ಸದಸ್ಯರಿಗಾಗಲೀ ಸಂಘದ ವ್ಯವಹಾರದಲ್ಲಿ ಆಸಕ್ತಿ ಇಲ್ಲವೆಂದು ಮತ್ತು ನೋಂದಣಿಯಾದ ಬೈಲಾ ಉದ್ದೇಶಗಳಂತೆ ಕಾರ್ಯನಿರ್ವಹಿಸದಿರುವುದನ್ನು ಪರಿಗಣಿಸಿ, ಉಲ್ಲೇಖ (1), (2) ಮತ್ತು (3) ರಲ್ಲಿಯ ಆದೇಶಗಳಲ್ಲಿ ಸಮಾಪನೆಗೆ ಆದೇಶಿಸಿದ್ದು, ಆಯಾ ತಾಲ್ಲೂಕಿನ ಸಹಕಾರ ಅಭಿವೃದ್ಧಿ ಅಧಿಕಾರಿಗಳನ್ನು ಸಮಾಪನಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಈ ಆದೇಶಗಳಲ್ಲಿ ನೇಮಕಗೊಂಡ ಸಮಾಪನಾಧಿಕಾರಿಗಳು ಪ್ರಭಾರ ವಹಿಸಿಕೊಂಡು, ಲೆಕ್ಕಪತ್ರ ಪರಿಶೀಲಿಸಿ, ಬ್ಯಾಂಕ್ ಖಾತೆಯ ಹಣವನ್ನು ಡ್ರಾ ಮಾಡಿ ಸದಸ್ಯರಿಗೆ ಷೇರಿನ ಬೆಲೆ ಆಧಾರಿತವಾಗಿ ಹಣ ಹಂಚಿಕೆ ಮಾಡಿದ್ದು, ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿ, ತಃಖ್ತೆಗಳನ್ನು ಸಲ್ಲಿಸಿರುತ್ತಾರೆ. ಸಮಾಪನಾಧಿಕಾರಿಯವರು ಅಂತಿಮ ಸಭೆ ನಡೆಸಿದ್ದು, ಈ ಸಂಘದ ಆಸ್ತಿ ಜವಾಬ್ದಾರಿ ಶೂನ್ಯ ಗೊಂಡಿರುವುದರಿಂದ, ಈ ಸಂಘದಲ್ಲಿ ಚರಾಸ್ತಿ, ಸ್ಥಿರಾಸ್ತಿ, ಸರ್ಕಾರದ ಷೇರು ಮತ್ತು ಸರ್ಕಾರದ ಸಾಲ ಇಲ್ಲದಿರುವುದನ್ನು ನಡವಳಿಕೆಯಲ್ಲಿ ವರದಿ ಮಾಡಿ, ನೋಂದಣಿ ರದ್ಧತಿಗಾಗಿ ನಿರ್ಣಯಿಸಿರುತ್ತಾರೆ. ಹಾಗೂ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಉಲ್ಲೇಖ (4) ರಲ್ಲಿಯ ಪತ್ರದಲ್ಲಿ ಸಾಗರ ಉಪವಿಭಾಗದ ಸಹಾಯಕ ನಿಬಂಧಕರು ಪ್ರಸ್ತಾವನೆ ಪರಿಶೀಲಿಸಿ ನೋಂದಣಿ ರದ್ಧತಿಗಾಗಿ ಶಿಫಾರಸ್ ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ರವರ ಶಿಫಾರಸ್ ಪತ್ರದನ್ವಯ ಮತ್ತು ಸಮಾಪನಾಧಿಕಾರಿಯವರ ಪತ್ರ ಹಾಗೂ ನಡವಳಿಕೆ ಆಧಾರಿತವಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು, ಶಿವಮೊಗ್ಗ ಜಿಲ್ಲೆಯಲ್ಲಿನ ಸಾಗರ ಉಪವಿಭಾಗದ ಸಮಾಪನಾ ಆದೇಶಿತ ಸಣ್ಣನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯೂ ಸಹಕಾರ ಸಂಘಗಳ ಹೆಸರಿನ ಮುಂದೆ ತೋರಿಸಿದಂತೆ ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನಾಂಕ: 10ನೇ ಫೆಬ್ರವರಿ 2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

| ಕ್ರ. ಸಂ. | ನೋಂದಣಿ ರದ್ದುಪಡಿಸಿದ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘದ ಹೆಸರು | ತಾಲ್ಲೂಕು | ನೋಂದಣಿ ಸಂಖ್ಯೆ : ದಿನಾಂಕ |
|---|---|---|---|
| 1 | 2 | 3 | 4 |
| 1 | ಸಣ್ಣ ನೀರಾವರಿ ನೀರುಬಳಕೆದಾರರ ಸಹಕಾರ ಸಂಘ ನಿ., ಗೇರಡ್ಲಿ | ಸೊರಬ | 29553:2001-02, ದಿ: 24.09.2001 |
| 2 | -ಡು- ಹೆಜ್ಜೆ | -ಡು- | 29524:2000-01, ದಿ: 29.12.2000 |
| 3 | -ಡು- ದ್ಯಾವನಹಳ್ಳಿ | -ಡು- | 29507:2000-01, ದಿ: 09.11.2000 |

| 1 | 2 | | 3 | 4 |
|---|---|---|---|---|
| 4 | ಸಣ್ಣ ನೀರಾವರಿ ನೀರುಬಳಕೆದಾರರ ಸಹಕಾರ ಸಂಘ ನಿ., ಕುಬಟೂರು | | ಸೊರಬ | 29509:2000–01, ದಿ: 09.11.2000 |
| 5 | –ಡು– | ಮಾವಲಿ | –ಡು– | 29540:2000–01, ದಿ: 16.07.2001 |
| 6 | –ಡು– | ಹಳೆಸೊರಬ | –ಡು– | 29515:2000–01, ದಿ: 30.11.2000 |
| 7 | –ಡು– | ತವನಂದಿ | –ಡು– | 29534:2000–01, ದಿ: 14.08.2000 |
| 8 | –ಡು– | ಹೀನಮುಸಗಲ್ಲು | ಹೊಸನಗರ | 29517:2000–01, ದಿ: 11.12.2000 |
| 9 | –ಡು– | ಅಮೃತ | –ಡು– | 29520:2000–01, ದಿ: 29.12.2001 |
| 10 | –ಡು– | ಹಿರೇದಿಂಬೂರು | ಶಿಕಾರಿಪುರ | 25440:2000–01, ದಿ: 14.08.2000 |
| 11 | –ಡು– | ಬಿಳ್ಕ | –ಡು– | 29511:2000–01, ದಿ: 20.11.2000 |
| 12 | –ಡು– | ಮಲ್ಲೇನಹಳ್ಳಿ | –ಡು– | 29502:2000–01, ದಿ: 31.10.2000 |

**ಕೆ. ಈಶ್ವರಸ್ವಾಮಿ**
ಪಿ.ಆರ್. 630 ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಆಸುಇ 79 ಸಅರ 2006, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2006**

ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರಾದ ಶ್ರೀ ವಿ.ವಿ.ನಟರಾಜನ್ ಇವರಿಗೆ 60 ದಿನಗಳ ಪರಿವರ್ತಿತ ರಜೆಯನ್ನು ದಿನಾಂಕ: 1.3.2006 ರಿಂದ 29.4.2006 ರವರೆಗೆ (ಉ.ದಿ.ಸೇ) ಮಂಜೂರು ಮಾಡಲಾಗಿದೆ. ರಜೆಯು ಮುಗಿದ ನಂತರ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಶ್ರೀಯುತರ ರಜೆ ಅವಧಿಯಲ್ಲಿ ಶ್ರೀಮತಿ ಸುಜ್ಯೋತಿ ಮುತ್ತಣ್ಣ, ಆಂತರಿಕ ಆರ್ಥಿಕ ಸಲಹೆಗಾರರು ಇವರನ್ನು ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 648 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಸಂಖ್ಯೆ: ಎಫ್.ಓ.ಸಿ.:ಸಿಓಎನ್:ಸಿಆರ್–5/2003–04, ದಿನಾಂಕ: 22ನೇ ಫೆಬ್ರವರಿ 2006**

**ಉಪಸ್ಥಿತರು:** ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯ, ಉಂಬ್ಳೇಬೈಲು.

**ಅರ್ಜಿದಾರರು:** ಮುಖೀಬ್ ಅಹಮದ್ ಬಿನ್ ಮಹಮದ್ ಯಾಸೀನ್,
ಸೋಮಿನಕೊಪ್ಪ, ಕೋಟೆ ಗಂಗೂರು ಅಂಚೆ, ಶಿವಮೊಗ್ಗ ಇವರ ಜಿ.ಪಿ.ಎ. ಹೋಲ್ಡರ್
ಮುಜಾಮಿಲ್ ಬಿನ್ ಆಲಿ ಜಾನ್, ಸೊಳೆಬೈಲು, ಊರಗಡೂರು ಅಂಚೆ, ಶಿವಮೊಗ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 24.06.2003 ರಂದು ಭದ್ರವತಿ ಅರಣ್ಯ ವಿಭಾಗದ ಉಂಬ್ಳೇಬೈಲು ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಹಾಲ ಲಕ್ಕವಳ್ಳಿ ಶಾಖೆಯ ಮತ್ತೂರು ಬೀಟ್‌ನ ಕುಸ್ಕೂರುನಿಂದ ಸಿದ್ದರಹಳ್ಳಿಗೆ ಹೋಗುವ ಡಾಂಬರು ರಸ್ತೆಯ ಹತ್ತಿರ ಒಂದು ಆಟೋರಿಕ್ಷ ಸಂಖ್ಯೆ: ಕೆಎ–17–7671 ರಲ್ಲಿ ಅಕ್ರಮವಾಗಿ ಬೀಟೆ ತುಂಡು 1=0.060 ಎಂ 3 ಸಾಗುವಾನಿ ಸೈಜು 4=0.158 ಎಂ 3 ಸಾಗಾಣಿಕೆ ಮಾಡುತ್ತಿದ್ದನ್ನು ಒಬ್ಬ ಆಸಾಮಿಯ ಸಮೇತ ವಶಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 39/03–04 ನ್ನು ದಾಖಲು ಮಾಡಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ಮೇಲ್ಕಂಡ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯ, ಉಂಬ್ಳೇಬೈಲು ರವರ ಸುಪರ್ದಿಗೆ ನೀಡಲಾಗಿದೆ.

ದಿನಾಂಕ: 24.07.2003 ರಂದು ಆಟೋರಿಕ್ಷ ನಂ: ಕೆಎ–17–7671 ಮಾಲೀಕರಾದ ಶ್ರೀ ಮುಖೀಬ್ ಅಹಮದ್ ಬಿನ್ ಮಹಮದ್ ಯಾಸೀನ್, ಶಿವಮೊಗ್ಗ ಇವರ ಜಿಪಿಎ ಮುಜಾಮಿಲ್ ಬಿನ್ ಆಲಿಜಾನ್, ಸೂಳೆಬೈಲು ವಾಸಿ, ಊರಗಡೂರು ಪೋಸ್ಟ್, ಶಿವಮೊಗ್ಗ ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಮೇಲ್ಕಂಡ ಆಟೋರಿಕ್ಷ ವಾಹನವನ್ನು ಬಾಡಿಗೆಗೆ ಕಳುಹಿಸಿದ್ದು, ಘಟನೆ ದಿವಸ ಚಾಂದ್ ಎಂಬ ವ್ಯಕ್ತಿಯ ಆಟೋ ಚಾಲಕನಾಗಿದ್ದು, ಸದರಿ ಚಾಲಕನು ಪ್ರತಿನಿತ್ಯ ಸರಿಯಾಗಿ ಬಾಡಿಗೆ ಹಣಕೊಡುತ್ತಿದ್ದು, ಒಳ್ಳೆಯ ವ್ಯಕ್ತಿ ಆಗಿರುತ್ತಾನೆ. ಸದರಿ ಚಾಲಕನಿಗೆ ಯಾವುದೇ ರಹದಾರಿಯಿಲ್ಲದ ಹಾಗೂ ನಿಷೇಧಿತ ವಸ್ತುಗಳನ್ನು ಸಾಗಿಸಬಾರದೆಂದೂ ಸೂಚನೆ ನೀಡಿರುವುದಾಗಿ ತಿಳಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ವಾಹನ ಚಾಲಕನಿಗೆ ಬೆದರಿಸಿ ಬಲವಂತವಾಗಿ ಮರದ ತುಂಡುಗಳನ್ನು ತುಂಬಿರುತ್ತಾರೆ. ಆ ಸಮಯದಲ್ಲಿ ಅರಣ್ಯ

ನೌಕರರು ತಕ್ಷಣ ಬಂದು ಪ್ರಕರಣ ದಾಖಲಿಸಿಕೊಂಡಿರುತ್ತಾರೆ. ಈ ಪ್ರಕರಣದಲ್ಲಿ ವಾಹನದ ಮಾಲೀಕ ಹಾಗೂ ಅಪರಾಧಿಯ ಪಾತ್ರ ಇರುವುದಿಲ್ಲ. ಮೇಲ್ಕಂಡ ವಾಹನದಿಂದಲೇ ಜೀವನ ನಿರ್ವಹಣೆ ಸಾಗುತ್ತಿದ್ದು, ವಾಹನವನ್ನು ವಲಯ ಅರಣ್ಯಾಧಿಕಾರಿ ಕಛೇರಿಯ ಬಯಲಿನಲ್ಲಿಟ್ಟಿರುವುದರಿಂದ ಬಿಸಿಲು ಮಳೆ ಗಾಳಿಗೆ ಸಿಕ್ಕಿ ಹಾಳಾಗಿ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ಹಾಗೂ ವಆಹನದ ಮಾಲೀಕರು ನ್ಯಾಯಾಲಯ ವಿಧಿಸುವ ಷರತ್ತಿಗೆ ಬದ್ಧನಾಗಿರುವುದಾಗಿ ತಿಳಿಸಿ ವಾಹನ ಬಿಡುಗಡೆ ಮಾಡಬೇಕೆಂದು ಕೋರಿಕೊಂಡಿರುತ್ತಾರೆ.

ದಿನಾಂಕ: 29.07.2003 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ 71(ಬಿ) ಪ್ರಕಾರ ಕಾರಣ ಕೇಳಿ ತಿಳಿವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ಮೇಲ್ಕಂಡ ಪ್ರಕರಣದಲ್ಲಿ ಸಮಜಾಯಿಸಿ ನೀಡಿ ವಾಹನದಲ್ಲಿ ನಡೆದ ಅಕ್ರಮ ಸಾಗಾಣಿಕೆಗೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 27.08.2003 ರಂದು ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಭದ್ರಾವತಿ ಇವರು ಈ ಪ್ರಕರಣದ ಬಗ್ಗೆ ಆಕ್ಷೇಪಣಾ ವರದಿ ಒಪ್ಪಿಸಿ, ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಆಟೋರಿಕ್ಷ ಸಂಖ್ಯೆ: ಕೆಎ:17–7671ನ್ನು ಸಿದ್ದರಹಳ್ಳಿಗೆ ಹೋಗುವ ಡಾಂಬರ್ ರಸ್ತೆಯ ಹತ್ತಿರ ದಿನಾಂಕ: 24.06.2003 ರಂದು ತಪಾಸಣೆ ಮಾಡಿದಾಗ ಸದರಿ ಆಟೋರಿಕ್ಷದಲ್ಲಿ ಅಕ್ರಮವಾಗಿ ಕಡಿತಲೆ ಮಾಡಿದ ಸಾಗುವಾನಿ ಮತ್ತು ಬೀಟೆ ತುಂಡುಗಳು ಇರುವುದು ಕಂಡು ಬಂದ ಕಾರಣ ಅವುಗಳನ್ನು ಅರಣ್ಯ ಮೊಕದ್ದಮೆ ಸಂಖ್ಯೆ: 39/2003 ಅಡಿಯಲ್ಲಿ ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಸದರಿ ವಾಹನದಲ್ಲಿ ಅಕ್ರಮವಾಗಿ ಕಡಿತಲೆ ಮಾಡಿದ ಸಾಗುವಾನಿ ಮತ್ತು ಬೀಟೆ ಮರಗಳು ಸಾಗಿಸುತ್ತಿದ್ದು ಮೇಲುನೋಟಕ್ಕೆ ಪುರಾವೆಯಾಗಿರುತ್ತದೆ. ಇದೂ ಅಲ್ಲದೇ ಸದರಿ ಆಟೋರಿಕ್ಷ ನಗರ ವ್ಯಾಪ್ತಿಯನ್ನು ಬಿಟ್ಟು ಹೊರ ಪ್ರದೇಶಕ್ಕೆ ಬಂದು ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದು, ಮೇಲುನೋಟಕ್ಕೆ ಪುರಾವೆಯಾಗಿರುತ್ತದೆ. ವಾಹನ ಮಾಲೀಕರು ಸದರಿ ವಾಹನವನ್ನು ಪ್ರಕರಣದ ಆರೋಪಿಗೆ ಬಾಡಿಗೆಗೆ ಓಡಿಸಲು ಕೊಟ್ಟಿದ್ದೆ ಎಂದು ಹೇಳಿರುತ್ತಾರೆ. ಆದರೆ, ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ. ಅರ್ಜಿದಾರರ ಅನುಮತಿಯ ಮೇರೆಗೆ ವಾಹನವನ್ನು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಮೇಲು ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಪ್ರಕರಣದ ಪೂರ್ಣ ವಿಚಾರಣೆ ಆಗುವವರೆಗೂ ಸದರಿ ವಾಹನವನ್ನು ವಿಲೇವಾರಿಯ ಬಗ್ಗೆ ಕ್ರಮ ಕೈಗೊಳ್ಳುವುದು ಸೂಕ್ತವಾಗಿರುವುದಿಲ್ಲ. ಒಂದು ವೇಳೆ ಸದರಿ ವಾಹನವನ್ನು ಷರತ್ತಿನ ಅಡಿಯಲ್ಲಿ ಬಿಟ್ಟುಕೊಟ್ಟದ್ದೇ ಆದಲ್ಲಿ ಸದರಿ ವಾಹನವನ್ನು ಇಂತಹುದೇ ರೀತಿಯ ಕಳ್ಳಸಾಗಾಣಿಕೆಯಲ್ಲಿ ವಾಹನದ ಮಾಲೀಕರು ತೊಡಗಿಸಿಕೊಳ್ಳುವ ಸಾಧ್ಯತೆ ಹೆಚ್ಚಾಗಿರುತ್ತದೆ. ಆದ್ದರಿಂದ ಅರ್ಜಿದಾರರು ಸಲ್ಲಿಸಿರುವ ಅರ್ಜಿಯನ್ನು ತಿರಸ್ಕರಿಸಬೇಕಾಗಿ ಸರ್ಕಾರಿ ಅಭಿಯೋಜನೆವತಿಯಿಂದ ಕೇಳಿಕೊಂಡಿರುತ್ತಾರೆ.

ಮೇಲ್ಕಂಡ ಪ್ರಕರಣದ ಬಗ್ಗೆ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ದಿನಾಂಕ: 21.01.2004 ರಂದು ವಿಚಾರಣೆ ನಡೆಸಿರುತ್ತದೆ. ಆ ದಿನ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳು, ಅರ್ಜಿದಾರರ ಅರ್ಜಿ ಹಾಗೂ ಸಹಾಯಕ ಸರ್ಕಾರಿ ಅಭಿಯೋಜಕರ ತಕರಾರು ಅರ್ಜಿಗಳನ್ನು ಪರಿಶೀಲಿಸಿ ವಾಹನ ಬಿಡುಗಡೆ ಕೋರಿಕೆಯನ್ನು ತಿರಸ್ಕರಿಸಿರುತ್ತದೆ. ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ಕ್ರಿಮಿನಲ್ ಮೊಕದ್ದಮೆ ಆದೇಶ ಸಂಖ್ಯೆ:12/04 ದಿನಾಂಕ: 01.06.2004 ರಲ್ಲಿ ಆದೇಶ ಹೊರಡಿಸಿ ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಮೌಲ್ಯದಷ್ಟು ಬ್ಯಾಂಕ್ ಗ್ಯಾರಂಟಿ ಪಡೆದು ಷರತ್ತುಗಳನ್ನು ವಿಧಿಸಿ ವಾಹನವನ್ನು ಬಿಡುಗಡೆ ಮಾಡಲು ಆದೇಶಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಆದೇಶವನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುವುದಿಲ್ಲ.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ: 24.11.2004 ರಿಂದ 15.02.2006ರ ವರೆಗೆ ವಿವಿಧ ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನದ ಮಾಲೀಕರ ಹೇಳಿಕೆಗಳನ್ನು ಸರ್ಕಾರಿ ಅಭಿಯೋಜಕರು ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ವಿಚಾರಣೆ ನಡೆಸಲಾಯಿತು. ಪ್ರಾಸಿಕ್ಯೂಷನ್ ಪರವಾಗಿ ದಿನಾಂಕ: 02.02.2005 ರಂದು ಶ್ರೀ ಪ್ರಸನ್ನ ಕುಮಾರ್ ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ಇವರನ್ನು ಪ್ರಾಸಾ 1 ಎಂದು ಹಾಗೂ ಕೃಷ್ಣಮೂರ್ತಿ ಬಿನ್ ರಾಮಪ್ಪ ಇವರನ್ನು ಪ್ರಾಸಾ 2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಪ್ರತಿವಾದಿ ಪರವಾಗಿ ಅರ್ಜಿದಾರರಿಗೆ ಹಲವಾರು ಬಾರಿ ನೋಟೀಸ್ ನೀಡಿದರು ಸಹ ನ್ಯಾಯಾಲಯಕ್ಕೆ ಹಾಜರಾಗಿ ಯಾವುದೇ ಸಾಕ್ಷಿ ನೀಡಿರುವುದಿಲ್ಲ. ಅಲ್ಲದೇ ಲಿಖಿತ ಮೂಲಕ ಸಹ ಯಾವುದೇ ವಾದವನ್ನು ನೀಡಿರುವುದಿಲ್ಲ.

ಈ ಪ್ರಕರಣದಲ್ಲಿ ವಾಸ್ತಾವಂಶ ಮತ್ತು ಕಾನೂನಿನ ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರ ಆಟೋರಿಕ್ಷಾ ಸಂಖ್ಯೆ: ಕೆಎ–17–7671 ರಲ್ಲಿ ಬೀಟೆ ತುಂಡು 1=0.060 ಎಂ3 ಸಾಗುವಾನಿ ಸೈಜು 4=0.158 ಎಂ3ನ್ನು ದಿನಾಂಕ: 24.06.2003 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ಕಾಯ್ದೆಯಂತೆ 71(ಎ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?

3. ಅಮಾನತ್ತು ಪಡಿಸಲಾಗಿರುವ ಆಟೋರಿಕ್ಷಾ ವಾಹನದ ಮಾಲೀಕರು ವಾಹನವನ್ನು ಬೀಟೆ ಮತ್ತು ಸಾಗುವಾನಿ ತುಂಡುಗಳು ಕಳ್ಳು ಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಬೀತುಪಡಿಸಿರುವರೇ? ಅಥವಾ ವಾಹನವು ಅರಣ್ಯೋತ್ಪನ್ನ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗೃತಾ ಕ್ರಮ ಕೈಗೊಂಡಿರುವರೇ?
4. ಈ ಪ್ರಕರಣದಲ್ಲಿ ಫಿರ್ಯಾಧಿದಾರರು ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯ್ದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?
5. ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. 1ನೇ ಅಂಶಕ್ಕೆ ಹೌದು ಎಂತಲೂ
2. 2ನೇ ಅಂಶಕ್ಕೆ ಹೌದು ಎಂತಲೂ
3. 3ನೇ ಅಂಶಕ್ಕೆ ಇಲ್ಲ ಎಂದಾಗಿರುತ್ತದೆ.
4. 4ನೇ ಅಂಶಕ್ಕೆ ಹೌದು ಎಂತಲೂ
5. 5ನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಕಾರಣಗಳು**

**ಅಂಶ–1:**

ದಿನಾಂಕ: 24.06.2003 ರಂದು ಉಂಬ್ಳೇಬೈಲು, ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಹಾಲ್ ಲಕ್ಕವಳ್ಳಿ ಶಾಖೆಯ ಮತ್ತೂರು ಬೀಟ್‌ನ ಕುಸ್ಕೂರುನಿಂದ ಸಿದ್ದರಹಳ್ಳಿಗೆ ಹೋಗುವ ಡಾಂಬರು ರಸ್ತೆಯ ಹತ್ತಿರ ಒಂದು ಆಟೋರಿಕ್ಷಾ ಸಂಖ್ಯೆ: ಕೆಎ–17–7671 ರಲ್ಲಿ ಅಕ್ರಮವಾಗಿ ಸಾಗುವಾನಿ ಸೈಜು 4=0.158ಎಂ3 ಹಾಗೂ ಬೀಟೆ ತುಂಡು 1=0.060 ಎಂ3 ಸಾಗಾಣಿಕೆ ಸಂಬಂಧ ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 39/2003–04ನ್ನು ದಾಖಲು ಮಾಡಿ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದ ಸಮಕ್ಷಮ ದಾಖಲಾತಿಗಳೊಂದಿಗೆ ಹಾಜರುಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾ ವತಿಯಿಂದ ಮೇಲ್ಕಂಡ ಪ್ರಾಸಿಕ್ಯೂಷನ್ ಸಾಕ್ಷಿದಾರರಾದ ಪಿಡಬ್ಲ್ಯೂ 1 ಹಾಗೂ ಸಾರ್ವಜನಿಕ ಸಾಕ್ಷಿಯಾದ ಪಿಡಬ್ಲ್ಯೂ 2 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು ಅವರ ಹೇಳಿಕೆಯ ಪ್ರಕಾರ ದಿನಾಂಕ: 24.06.2003 ರಂದು ಸಿಬ್ಬಂದಿಯವರು ಕುಸ್ಕೂರುನಿಂದ ಸಿದ್ದರಹಳ್ಳಿಗೆ ಹೋಗುವ ಡಾಂಬರು ರಸ್ತೆಯಲ್ಲಿ ಗಸ್ತು ಮಾಡುತ್ತಿದ್ದಾಗ ಕುಸ್ಕೂರುನಿಂದ ಸಿದ್ದರಹಳ್ಳಿ ಕಡೆಗೆ ಒಂದು ಆಟೋ ಬರುವುದು ಕಂಡುಬಂದಿತು ಹತ್ತಿರ ಬರುತ್ತಿರುವಾಗ ಅದರಲ್ಲಿ ಮರದ ತುಂಡುಗಳು ಇರುವುದು ಕಂಡು ಬಂದಿತು. ಆಗ ವಾಹನವನ್ನು ನಿಲ್ಲಿಸಲು ಸೂಚನೆ ಕೊಟ್ಟೆವು. ವಾಹನ ನಿಲ್ಲಿಸದೇ ಮುಂದೆ ಹೋಯಿತು. ವಾಹನವನ್ನು ಬೆನ್ನಟ್ಟಿ ಹೋಗಿ ನಿಲ್ಲಿಸಿದೆವು. ಆಟೋ ನಿಲ್ಲಿಸಿದ ತಕ್ಷಣ ಆಟೋದಲ್ಲಿ ಇದ್ದ ಇಬ್ಬರು ಕತ್ತಲೆಯಲ್ಲಿ ಓಡಿ ಹೋದರು. ಆಟೋ ಚಾಲಕನನ್ನು ಭಂದಿಸಲಾಯಿತು. ಆಟೋವನ್ನು ಪರಿಶೀಲಿಸಿದಾಗ 4 ಸಾಗುವಾನಿ ಸೈಜು 1 ಬೀಟೆ ತುಂಡು ಇರುವುದು ಕಂಡು ಬಂದಿತು. ಆಟೋರಿಕ್ಷಾ ಚಾಲಕನನ್ನು ವಿಚಾರಿಸಲಾಗಿ ಸಾಗುವಾನಿ ಮತ್ತು ಬೀಟೆ ತುಂಡುಗಳು ಆಟೋದಿಂದ ಇಳಿದು ಓಡಿ ಹೋದ ವ್ಯಕ್ತಿಗಳಿಗೆ ಸೇರಿದ್ದು ನಾನು ಬಾಡಿಗೆಗೆ ಬಂದಿರುವುದಾಗಿ ತಿಳಿಸಿದ ಆಟೋ ಸಂಖ್ಯೆ: ಕೆಎ–17–7671 ಆಗಿರುತ್ತದೆ. ಅಮಾನತ್ತು ಪಡಿಸಿಕೊಂಡ ಅರಣ್ಯ ಉತ್ಪನ್ನಗಳಿಗೆ ಇಲಾಖಾ ಛಾಪಾ ಕೆಎಸ್‌ಎಫ್‌ಡಿ ಆರ್2 ಬಿಬಿ1 ಹಾಕಲಾಯಿತು. ಕ್ರಮ ಸಂಖ್ಯೆ:1 ರಿಂದ 5 ಕೂಡಲಾಯಿತು. ಸ್ಥಳದಲ್ಲಿ ಮಹಜರ್ ಮಾಡಲಾಯಿತು. ಮಹಜರ್‌ನ್ನು ನಿಶಾನೆ ಪಿ1 ಎಂದು ಗುರುತಿಸಿದ್ದು, ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಲಾಯಿತು. ನಿಶಾನೆ ಪಿ2 ಪ್ರಥಮ ಮಾಹಿತಿ ವರದಿ ಆಗಿದ್ದು, ಫಿರ್ಯಾಧಿದಾರರ ಸಹಿ ಪಿ2ಎ ಆಗಿರುತ್ತದೆ. ವಾಹನ ಹಾಗೂ ಅರಣ್ಯ ವಸ್ತುಗಳನ್ನು ವಶಪಡಿಸಿಕೊಂಡ ಬಗ್ಗೆ ಜಪ್ತಿ ವರದಿ ದಾಖಲಿಸಿದ್ದು ಸದರಿ ವರದಿಯನ್ನು ನಿಶಾನೆ ಪಿ3 ಹಾಗೂ ಫಿರ್ಯಾಧಿದಾರರ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಿರುತ್ತದೆ. ಪ್ರಕರಣದಲ್ಲಿ ಬಂಧಿಸಿದ ಅಪರಾಧಿಯು ನೀಡಿದ ಹೇಳಿಕೆ ನಿಶಾನೆ ಪಿ4 ಎಂದು ಗುರುತಿಸಿರುತ್ತದೆ. ಆಟೋರಿಕ್ಷಾ ಮತ್ತು ವಾಹನದಲ್ಲಿದ್ದ ವಸ್ತುಗಳನ್ನು ನೋಡಿದರೆ ಗುರುತಿಸುತ್ತೇವೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಸಾಕ್ಷಿದಾರರು ಹೇಳಿಕೆ ನೀಡಿ ಗಸ್ತು ಹೋಗುವ ಮೊದಲು ನನಗೆ ಯಾವುದೇ ಮಾಹಿತಿ ಇರಲಿಲ್ಲ. ಸದರಿ ದಿನ ನಾವು ಬಹಳಷ್ಟು ವಾಹನಗಳನ್ನು ತಪಾಸಣೆ ಮಾಡಿದೆವು. ಆಟೋವನ್ನು ನಿಲ್ಲಿಸಲು ಸೂಚನೆ ನೀಡಿದೆವು. ವಾಹನವು 2 ಕಿ.ಮೀ. ಮುಂದು ಹೋಗಿ ಅದನ್ನು ಬೆನ್ನಟ್ಟಿ ನಿಲ್ಲಿಸಲಾಯಿತು. ಒಳಗೆ ಇದ್ದ ವ್ಯಕ್ತಿಗಳು ಆಟೋ ಚಾಲನೆಯಲ್ಲಿದ್ದಾಗಲೇ ಇಳಿದು ಓಡಿ ಹೋದರು. ಆಟೋ ರೀಕ್ಷಾದಲ್ಲಿ ಸಾಗುವಾನಿ ಬೀಟೆ ತುಂಡುಗಳು ಚಾಲಕನ ಸೀಟಿಗೆ ಚಾಚುವ ಹಾಗೆ ಇಡಲಾಗಿತ್ತು. ಆಟೋ ಹಿಡಿದ ಅಕ್ಕಪಕ್ಕದಲ್ಲಿ ಯಾರು ಇರಲಿಲ್ಲ. ಅಮಾನತ್ತುಪಡಿಸಿಕೊಂಡ ವಸ್ತುಗಳ ಮೇಲೆ ಎಫ್.ಓ.ಸಿ. ಸಂಖ್ಯೆಯನ್ನು ಬರೆಯಲಾಯಿತು. ಆಟೋದ ಚಾಲಕ ಚಾಂದ್ ತನ್ನ ಹೇಳಿಕೆಯಲ್ಲಿ ಆಟೋ ಮಾಲೀಕನ ಬಗ್ಗೆ ಯಾವುದೇ ವಿಷಯವನ್ನು ಹೇಳಿರುವುದಿಲ್ಲ. ತನಿಖಾ ಕಾಲದಲ್ಲಿ ವಾಹನದ ಮಾಲೀಕ ನನ್ನ ಕರೆಸಿ ವಿಚಾರಣೆ ಮಾಡಲಿಲ್ಲ. ನಾನು ಆಟೋರಿಕ್ಷವನ್ನು ಮೇಲೆ ಹೇಳಿದ ದಿನಾಂಕದಂದು ಮಾಲು ಸಹಿತ ಅಮಾನತ್ತು ಪಡಿಸಿಕೊಂಡಿಲ್ಲ ಎಂದು ಹೇಳುವುದು ಸರಿಯಲ್ಲ. ಆಟೋವನ್ನು ಅಮಾನತ್ತು ಪಡಿಸಿಕೊಂಡ ಸಂದರ್ಭದಲ್ಲಿ ಯಾವುದೇ ಅಕ್ರಮ ಮಾಲುಗಳು ಇರಲಿಲ್ಲ ಹಾಗೂ ಸುಳ್ಳು ಕೇಸನ್ನು ದಾಖಲು ಮಾಡಿದ್ದೀರಾ ಎಂದು ಹೇಳುವುದು ಸರಿಯಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ p w1 ಮತ್ತು p w2 ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್‌ನಲ್ಲಿರುವ ಅಂಶಗಳಿಗೂ ತಾಳೇ ಹೊಂದಿರುತ್ತದೆ. ಅಲ್ಲದೇ ಎಲ್ಲಾ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದೇ ಆಗಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮ ಸಾಗುವಾನಿ ಮತ್ತು ಬೀಟೆ ತುಂಡುಗಳು ಸಾಗಾಣಿಕೆ ಆಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ಸಂಶಯ ರಹಿತವಾಗಿ ರುಜುವಾತು ಪಡಿಸಿರುತ್ತಾರೆ. ಈ ಬಗ್ಗೆ ಅಧಿಕೃತವಾದ ಸಾಕ್ಷ್ಯಾಧಾರಗಳನ್ನು ಸಹ ನೀಡಿರುತ್ತಾರೆ. ಆದ್ದರಿಂದ ಅಂಶ 1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಆಟೋರಿಕ್ಷ ನಂ.ಕೆಎ–17–7671ರ ಮಾಲೀಕರಾದ ಶ್ರೀ ಮುಖೀಬ್ ಅಹಮದ್ ರವರ ಜಿಪಿಎ ಮುಜಾಮಿಲ್ ಬಿನ್ ಅಲಿಜಾನ್ ಸೂಳೇಬೈಲು, ಊರಗಡೂರು ಅಂಚೆ, ಶಿವಮೊಗ್ಗ ಇವರು ದಿನಾಂಕ: 24.07.2003 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು, ದಿನಾಂಕ: 29.07.2003 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ದಿನಾಂಕ: 06.08.2003 ರಂದು ಸಮಾಜಾಯಿಷಿಯನ್ನು ನೀಡಿರುತ್ತಾರೆ. ಅರ್ಜಿದಾರರು ಈ ನ್ಯಾಯಾಲಯಕ್ಕೆ ಹಲವು ಬಾರಿ ಹಾಜರಾಗಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ಆರ್.ಸಿ. ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ 2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–3:**

ವಾಹನದ ಆರ್.ಸಿ. ಮಾಲೀಕರ ಜಿಪಿಎ ಆದ ಶ್ರೀ ಮುಜಾಮಿಲ್ ಬಿನ್ ಆಲಿಖಾನ್ ಸೂಳೆಬೈಲು ಇವರು ದಿನಾಂಕ: 24.07.2003 ರಂದು ಈ ಪ್ರಾಧಿಕಾರದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ಸಮಜಾಯಿಷಿ ನೀಡಿರುತ್ತಾರೆ. ಅವರ ಮಧ್ಯಂತರ ಅರ್ಜಿಯನ್ನು ಈ ನ್ಯಾಯಾಲಯವು ತಿರಸ್ಕರಿಸಿರುತ್ತದೆ. ವಾಹನದ ಮಾಲೀಕರು (ಜಿ.ಪಿ.ಎ) ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆಗೆ ಆದೇಶಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಷರತ್ತುಗಳನ್ನು ಪೂರೈಸಿ ವಾಹನವನ್ನು ವಶಕ್ಕೆ ಪಡೆದಿರುವುದಿಲ್ಲ.

ಈ ಪ್ರಕರಣದಲ್ಲಿ ಅಂತಿಮ ಆದೇಶದ ಬಗ್ಗೆ ವಿಚಾರಣೆಗೆ ಹಲವಾರು ಬಾರಿ ನೋಟೀಸ್ ನೀಡಿದರು ಸಹ ಅರ್ಜಿದಾರರು ಹಾಜರಾಗದೇ ಗೈರು ಹಾಜರಾಗಿರುತ್ತಾರೆ. ಈ ಬಗ್ಗೆ ಯಾವುದೇ ಲಿಖಿತವಾದ ಕಾರಣವನ್ನು ನೀಡಿರುವುದಿಲ್ಲ ಮತ್ತು ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿ ತಪ್ಪಿತಸ್ಥರಲ್ಲ ಎಂಬ ಬಗ್ಗೆ ನಿರೂಪಿಸಿರುವುದಿಲ್ಲ.

ಮೇಲ್ಕಂಡ ಅರ್ಜಿದಾರರ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ಅಭಿಯೋಜನಾವತಿಯಿಂದ ನೀಡಿದ ವಾದನವನ್ನು ಆಲಿಸಿ ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುತ್ತೇನೆ.

1. ಅರ್ಜಿದಾರರು ವಾಹನದ ಆರ್.ಸಿ. ಮಾಲೀಕರಾಗಿರುವುದಿಲ್ಲ. ಅವರು ಜಿ.ಪಿ.ಎ ಪಡೆದ ವ್ಯಕ್ತಿಯಾಗಿರುತ್ತಾರೆ.
2. ಅರ್ಜಿದಾರರು ವಾಹನವನ್ನು ಪ್ರಕರಣದಲ್ಲಿ ಸಿಲುಕಿಸಿದ ಚಾಲಕನ ಮೇಲೆ ಪೊಲೀಸ್ ಠಾಣೆಯಲ್ಲಿ ಫಿರ್ಯಾದನ್ನು ಸಲ್ಲಿಸಿರುವುದಿಲ್ಲ.
3. ಅರ್ಜಿದಾರರು ನೇಮಿಸಿಕೊಂಡ ಚಾಲಕನಿಗೆ ಪರವಾನಿಗೆಯಿಲ್ಲದ ವಸ್ತುಗಳನ್ನು ಹಾಕಬಾರದು ಎಂದು ತಿಳುವಳಿಕೆ ನೀಡಿರುವ ಬಗ್ಗೆ ಯಾವುದೇ ದಾಖಲಾತಿಗಳಲ್ಲಿ ತಿಳಿಸಿರುವುದಿಲ್ಲ.
4. ಅರ್ಜಿದಾರರು ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದಿಂದ ತಾತ್ಕಾಲಿಕ ಬಿಡುಗಡೆಗೆ ಆದೇಶಿಸಿದ ವಾಹನವನ್ನು ವಶಕ್ಕೆ ಪಡೆದಿರುವುದಿಲ್ಲ. ಹಾಗೂ ಈ ನ್ಯಾಯಾಲಯದಲ್ಲಿ ಅಂತಿಮ ವಿಚಾರಣೆಯಲ್ಲಿ ತಾನು ತಪ್ಪಿತಸ್ಥರಲ್ಲ. ಈ ಪ್ರಕರಣದಲ್ಲಿ ಬಗ್ಗೆ ನನ್ನ ಪಾತ್ರ ಇರುವುದಿಲ್ಲವೆಂಬ ಬಗ್ಗೆ ಯಾವುದೇ ಸಾಕ್ಷ್ಯಧಾರಗಳನ್ನು ನೀಡಿರುವುದಿಲ್ಲ ಹಾಗೂ ನ್ಯಾಯಾಲಯಕ್ಕೂ ಸಹ ಗೈರು ಹಾಜರಾಗಿರುತ್ತಾರೆ. ಆದ್ದರಿಂದ ಅವರಿಗೆ ವಾಹನದ ಬಗ್ಗೆ ಆಸಕ್ತಿ ಇಲ್ಲವೆಂದು ಮತ್ತು ಪ್ರಕರಣದಲ್ಲಿ ಅವರು ಸಹ ಭಾಗಿ ಆಗಿ ತಪ್ಪಿತಸ್ಥರಲ್ಲ ಎಂಬುದನ್ನು ನಿರೂಪಿಸಲು ವಿಫಲರಾಗಿರುತ್ತಾರೆ.

ವಾಹನದ ಮಾಲೀಕರು ಅಥವಾ ಅದರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಸರ್ಕಾರದ ಸೊತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿಯಿಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತಮ್ಮ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಧಾರಗಳನ್ನು ವಾಹನದ ಮಾಲೀಕರು ಅಥವಾ ಅದರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರ ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಸಾಗುವಾನಿ ಸೈಜು ಮತ್ತು ಬೀಟೆ ತುಂಡುಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅದರ ಪ್ರತಿನಿಧಿಗಳು ಯಾವುದೇ ಮುನ್ನೇಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರ ನೀಡಿರುವುದಿಲ್ಲ. ವಾಹನದಲ್ಲಿ ನನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದಕ್ಕೆ ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2) ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ, ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಅವರುಗಳ ಜವಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confeseating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber,

sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಮಧ್ಯಂತರ ವಾಹನದ ಬಿಡುಗಡೆ ಕೋರಿ ಅರ್ಜಿ ಸಲ್ಲಿಸಿರುವುದು ಹೊರತುಪಡಿಸಿ ಈ ನ್ಯಾಯಾಲಯಕ್ಕೆ ಯಾವುದೇ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ನ್ಯಾಯಾಲಯದಲ್ಲಿ ವಿಚಾರಣೆಗೂ ಸಹ ಗೈರು ಹಾಜರಾಗಿ ಸಾಕ್ಷ್ಯಧಾರಗಳನ್ನು ನೀಡಲು ವಿಫಲರಾಗಿರುತ್ತಾರೆ. ವಾಹನದ ಮಾಲೀಕರು ಮಧ್ಯಂತರ ಅರ್ಜಿಯಲ್ಲಿ ತಿಳಿಸಿದ ವಿಷಯವು ಒಂದು ಕಟ್ಟುಕತೆ ಎಂದು ಹಾಗೂ ವಾಹನದಲ್ಲಿ ಸಾಗುವಾನಿ ಸೈಜು ಮತ್ತು ಬೀಟೆ ತುಂಡುಗಳು ವಾಹನದ ಮಾಲೀಕರಿಗೆ ಗೊತ್ತಿದ್ದು ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ–4:**

ದಿನಾಂಕ: 24.06.2003 ರಂದು ಆಟೋರಿಕ್ಷಾ ಸಂಖ್ಯೆ: ಕೆಎ–17–7671 ರಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು 4=0.158 ಎಂ3, ಬೀಟೆ ತುಂಡು 1=0.060 ಎಂ3ನ್ನು ಹಾಲಲಕ್ಕವಳ್ಳಿ ಶಾಖೆಯ ಕುಸ್ಕೂರುನಿಂದ ಸಿದ್ದರಹಳ್ಳಿಗೆ ಹೋಗುವ ಡಾಂಬರ್ ರಸ್ತೆಯಲ್ಲಿ ಉಂಬ್ಳೆಬೈಲು ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ವಶಪಡಿಸಿಕೊಂಡು ಅಮೋ ಸಂಖ್ಯೆ: 39/03–04 ದಾಖಲು ಮಾಡಿರುತ್ತಾರೆ.

ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸೊತ್ತೆಂದು ಭಾವಿಸಬೇಕಾಗಿರುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತು ಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

10

ಈ ಪ್ರಕರಣದಲ್ಲಿ ಅರ್ಜಿದಾರರು/ವಾಹನದ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ನಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾಗುವಾನಿ ಸೈಜು 4=0.158 ಎಂ3 ಮತ್ತು ಬೀಟೆ ತುಂಡು 1=0.060 ಎಂ3 ಅರಣ್ಯ ಕಾಯ್ದೆ 1963 ಕಲಂ 80 ರಂತೆ ಸರ್ಕಾರಿ ಸ್ವತ್ತೆಂದು ರುಜುವಾತಾಗಿರುತ್ತದೆ.

**ಅಂಶ–5:**

ಅರ್ಜಿದಾರರಿಗೆ ಸೇರಿದ ಆಟೋರಿಕ್ಷ ನಂ.ಕೆಎ–17.7671 ರಲ್ಲಿ ಸರ್ಕಾರದ ಸೊತ್ತಾದ 4 ಸಾಗುವಾನಿ ಸೈಜುಗಳು 0.158 ಎಂ3 ಮತ್ತು ಬೀಟೆ ತುಂಡು 1=0.060 ಎಂ3 ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನದ ಮಾಲೀಕರು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಭಾಗಿಯಾಗಿದ್ದಾರೆಂಬುದು ಸಾಕ್ಷ್ಯಧಾರಗಳಿಂದ ರುಜುವಾತಾಗಿರುತ್ತದೆ. ಫಿರ್ಯಾಧಿದಾರರು ಮಾಲುಗಳ ಸಮೇತ ವಾಹನ ಅಮಾನತ್ತು ಪಡಿಸಿದ್ದು ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರಗಳನ್ನು ಅವರು ನೀಡಿರುತ್ತಾರೆ. ಅರ್ಜಿದಾರರು ತಾನು ಯಾವುದೇ ಆಪಾದನೆಯನ್ನು ಮಾಡಿರುವುದಿಲ್ಲ ಎಂಬುದನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಧಾರಗಳನ್ನು ಹಾಜರುಪಡಿಸದ ಕಾರಣ, ಅರ್ಜಿದಾರರ ವಾಹನ ಅಕ್ರಮ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಆದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಆದ್ದರಿಂದ ಅಂಶ–5ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನಗಳ ಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೇ ಪ್ರಾಧೀಕಾರಕ್ಕೆ ಹಾಜರುಪಡಿಸಿದೆ ಪ್ರಕರಣದ ಮಹಜರ್ ನಿಶಾನೆ ಪಿ1ರ ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿಗಳಾದ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿನುಡಿದಂತೆ ಸಾಗುವಾನಿ ಸೈಜುಗಳು 4=0.158 ಎಂ3 ಹಾಗೂ ಬೀಟೆ ತುಂಡು 1=0.060 ಎಂ3 ಸಾಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು ಸಾಕ್ಷ್ಯಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನದ ಉಸ್ತುವಾರಿ ದಾರರಾಗಲೀ ವಾಹನವು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ಸೈಜು ಮತ್ತು ಬೀಟೆ ತುಂಡುಗಳು ಅರಣ್ಯ ಕಾಯ್ದೆ 1963 ಕಲಂ 24, 50, 62, 104(ಎ) 71(ಎ) ಹಾಗೂ ಅರಣ್ಯ ಕಾನೂನು 1969 ನಿಯಮ 144, 145ರ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ನೋಂದಾವಣೆ ಸಂಖ್ಯೆ: ಕೆಎ–17–7671 ಆಟೋರಿಕ್ಷಾ (ಇಂಜಿನ್ ನಂ.22EBEJ-37243 ಚಾಸೀಸ್ ನಂ.22CBEJ 33762) ಹಾಗೂ ಸಾಗುವಾನಿ ಸೈಜು 4=0.158 ಎಂ3 ಹಾಗೂ ಬೀಟೆ ತುಂಡು 1=0.060 ಎಂ3 ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸದೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 22.02.2006 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎ. ರಾಧಾದೇವಿ**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 649

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರಂ ರವರ ನಡವಳಿಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: 14:2003–04, ಶ್ರೀ ಮಹಮದ್‌ಗೌಸ್ ಬಿನ್ ಅಬ್ದುಲ್ ಸುಭಾನ್ ಕನಕಪುರ ಇವರ ಸ್ಥಿರಾಸ್ತಿಯನ್ನು ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇವರ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರ ರವರ ಪತ್ರದ ಸಂಖ್ಯೆ: ಸಸಸನಿರಾ:46:ಅಮಲ್ಜಾರಿ:10:2005–06, ದಿನಾಂಕ: 7.11.2005.
2) ಈ ಕಛೇರಿಯ ನೋಟೀಸು ಸಂಖ್ಯೆ: ಸಸನಿರಾ:46:ಸಿಇಪಿ:14:2003–04, ದಿನಾಂಕ: 14.12.2005.

**ಪ್ರಸ್ತಾವನೆ:**

ಶ್ರೀ ಮಹಮದ್ ಗೌಸ್ ಬಿನ್ ಅಬ್ದುಲ್‌ಸುಬಾನ್, ಸಿಲ್ಕ್ ಮರ್ಚೆಂಟ್, ಮೇಳೇಕೋಟೆ, ಕನಕಪುರ ರವರು ಅರ್ಬನ್ ಕೋಂ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರದಲ್ಲಿ ಸಾಲ ಪಡೆದು ಸುಸ್ತಿಯಾದ ಪ್ರಯುಕ್ತ ದಿನಾಂಕ: 29.2.2000 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: 14:2003–04ರ ರೀತ್ಯ ಕ್ರಮ ಜರುಗಿಸಿ ಬಾಕಿ ರೂ.4,77,624–00 (ರೂ ನಾಲ್ಕು ಲಕ್ಷದ ಎಪ್ಪತ್ತೇಳು ಸಾವಿರದ ಆರುನೂರ ಇಪ್ಪತ್ತನಾಲ್ಕು ಮಾತ್ರ) ಗಳನ್ನು ವಸೂಲಿ ಮಾಡಿಕೊಳ್ಳಲು ಸದರಿ ಶ್ರೀ ಮಹಮದ್‌ಗೌಸ್ ಬಿನ್ ಅಬ್ದುಲ್‌ಸುಬಾನ್ ಇವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 10.8.2005 ರಂದು ನಿಗದಿಗೊಳಿಸಿ ಪ್ರಚುರ ಪಡಿಸಲಾಗಿತ್ತು. ಸದರಿ ದಿನಾಂಕದಂದು ಹರಾಜಿನಲ್ಲಿ ಬಿಡ್ದುದಾರರು ಯಾರೂ ಭಾಗವಹಸಿದೇ ಹೋದ ಪ್ರಯುಕ್ತ ಶ್ರೀ ಮಹಮದ್‌ಗೌಸ್ ಬಿನ್ ಅಬ್ದುಲ್ ಸುಬಾನ್‌ರವರಿಂದ ಸಂಘಕ್ಕೆ ಬರಬೇಕಾದ ರೂ.4,77,624–00 ಗಳಿಗೆ ಸದರಿಯವರ ಸ್ತಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮಾರಾಟಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಶ್ರೀ ಮಹಮದ್‌ಗೌಸ್ ಬಿನ್ ಅಬ್ದುಲ್ ಸುಬಾನ್ ರವರಿಗೆ ದಿನಾಂಕ: 14.12.2005 ರಂದು ಈ ಕಛೇರಿಯಿಂದ ನೊಟೀಸು ಜಾರಿ ಮಾಡಿ ದಿನಾಂಕ: 21.1.2006 ರಂದು ಬೆಳಿಗ್ಗೆ 11.00 ಗಂಟೆಗೆ ಕಛೇರಿಯಲ್ಲಿ ಹಾಜರಾಗಿ ಅವರ ಆಕ್ಷೇಪಣೆಯನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ಸದರಿ ನೊಟೀಸನ್ನು ಮೂಲ ಸಾಲಗಾರರಾದ ಶ್ರೀ ಮಹಮದ್ ಗೌಸ್ ಬಿನ್ ಅಬ್ದುಲ್ ಸುಬಾನ್‌ರವರು ಪಡೆದಿದ್ದರೂ ಸಹ ವಿಜಾರಣೆಯ ದಿನಾಂಕಗಳನ್ನು ಕಛೇರಿಗೆ ಹಾಜರಾಗಿ ಅವರ ಹೇಳಿಕೆಯನ್ನು ನೀಡಲು ವಿಫಲರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿಯವರ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ ಸಂಖ್ಯೆ: ಸಸಸನಿರಾ:46:ಆ.ವರ್ಗಾವಣೆ:01:2005–06, ದಿನಾಂಕ: 7ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಶ್ರೀ ವಿ. ಗಂಗಾಧರಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪ ವಿಭಾಗ, ರಾಮನಗರಂ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರೂಪಿಸಲಾದ ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001ರ ಪ್ರಕಾರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಮಹಮದ್ ಗೌಸ್ ಬಿನ್ ಅಬ್ದುಲ್ ಸುಬಾನ್ ಸಿಲ್ಕ್ ಮರ್ಚೆಂಟ್, ಮಸೀದಿ ಪಕ್ಕ, ಮೆಳೆಕೋಟೆ, ಕನಕಪುರ ರವರ ಈ ಕೆಳಕಂಡ ಸ್ಥಿರಸ್ವತ್ತನ್ನು ದಿನಾಂಕ: 10.8.2005 ರಂದು ಪಡೆದ ಬಹಿರಂಗ ಹರಾಜಿನಲ್ಲಿ ಅರ್ಬನ್ ಕೋ_ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ಬರಬೇಕಾದ ರೂ.4,77,624–00 (ರೂ.ನಾಲ್ಕು ಲಕ್ಷದ ಎಪ್ಪತ್ತೇಳು ಸಾವಿರದ ಆರುನೂರ ಇಪ್ಪತ್ತನಾಲ್ಕು ಮಾತ್ರ) ಗಳಿಗೆ ಹರಾಜು ಮಾಡಲು, ಸದರಿ ಹರಾಜಿನಲ್ಲಿ ಬಿಡ್ದುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಮಹಮದ್ ಗೌಸ್ ಬಿನ್ ಅಬ್ದುಲ್ ಸುಬಾನ್‌ರವರ ಸ್ಥಿರಸ್ವತ್ತನ್ನು ಈ ಕೆಳಕಂಡ ಷರತ್ತುಗಳೊಡನೆ ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ. ಹಾಗೂ ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ: : ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್ ರಾಮನಗರ ರಸ್ತೆ, ಮೆಳೆಕೋಟೆ, ದಕ್ಷಿಣ ಭಾಗದಲ್ಲಿರುವ ಮಸೀದಿಯ ಹತ್ತಿರವಿರುವ ಪುರಸಭಾ ಖಾತಾ ಸಂಖ್ಯೆ: 3595:3259 ಮತ್ತು 3593:3258 ರಲ್ಲಿ ಮಂಗಳೂರು ಹೆಂಚಿನ ಮನೆ ಮತ್ತು ಷೀಟಿನ ಮನೆ ಮತ್ತು ಸಂಬಂಧಪಟ್ಟ ನಿವೇಶನ.

**ವಿಸ್ತೀರ್ಣ:**

ಪೂರ್ವ ಪಶ್ಚಿಮ : 20 ಅಡಿಗಳು ಉತ್ತರ ದಕ್ಷಿಣ : 65 ಅಡಿಗಳು.

ಪೂರ್ವ ಪಶ್ಚಿಮ : 20 ಅಡಿಗಳು ಉತ್ತರ ದಕ್ಷಿಣ : 65 ಅಡಿಗಳು.

**ಒಟ್ಟು ವಿಸ್ತೀರ್ಣ:**

ಪೂರ್ವ ಪಶ್ಚಿಮ : 42 ಅಡಿಗಳು ಉತ್ತರ ದಕ್ಷಿಣ : 65 ಅಡಿಗಳು.

**ಚೆಕ್ಕುಬಂದಿ:**

ಪೂರ್ವಕ್ಕೆ : ಮಹಮದ್ ಪೀರ್‌ಸಾಬ್‌ರವರ ಮನೆ ಮತ್ತು ಗೋಡೆ ಒತ್ತು.

ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ ಗಲ್ಲಿ

ಉತ್ತರಕ್ಕೆ : ಮಹಮದ್ ಅಬ್ದುಲ್ ಗಫಾರ್‌ರವರ ಸ್ವತ್ತು.

ದಕ್ಷಿಣಕ್ಕೆ : ಕನ್ಸರ್‌ವೆನ್ಸಿ ಗಲ್ಲಿ.

ಈ ಮಧ್ಯೆ ಇರುವ ಸ್ವತ್ತು. ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಮತ್ತು ಷೀಟ್ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ಷರತ್ತುಗಳು ಹಾಗೂ ನಿಯಮಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವು ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟ ಹಣವನ್ನು ಸಂಘಕ್ಕೆ ಜಮಾ-ಖರ್ಚು ಮಾಡಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಡನೆ ದಿನಾಂಕ: 7.2.2006 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪ ವಿಭಾಗ, ರಾಮನಗರಂ.

**ನಮೂನೆ-VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಕಾರ್ಯದರ್ಶಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 71 ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಮಹಮದ್ ಗೌಸ್ ಬಿನ್ ಅಬ್ದುಲ್ ಸುಬಾನ್, ಸಿಲ್ಕ್ ಮರ್ಚೆಂಟ್, ಮಳೆಕೋಟೆ ಕನಕಪುರ ಇದರ ಷೆಡ್ಯೂಲ್ ಸ್ವತ್ತನ್ನು ಮಾರಾಟದ ದಿನಾಂಕ: 10.8.2005 ರಂದು ಬಹಿರಂಗ ಹರಾಜಿನಲ್ಲಿಟ್ಟು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಭಾಧ್ಯತೆಯು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ:**

ಕನಕಪುರ ಟೌನ್ ರಾಮನಗರ ರಸ್ತೆ, ಮೆಳೆಕೋಟೆ, ದಕ್ಷಿಣ ಭಾಗದಲ್ಲಿರುವ ಮಸೀದಿಯ ಹತ್ತಿರವಿರುವ ಪುರಸಭಾ ಖಾತೆ ಸಂಖ್ಯೆ: 3595:3259 ಮತ್ತು 3593:3258 ರಲ್ಲಿ ಮಂಗಳೂರು ಹೆಂಚಿನ ಮನೆ ಮತ್ತು ಷೀಟಿನ ಮನೆ ಮತ್ತು ಸಂಬಂಧಪಟ್ಟ ನಿವೇಶನ.

**ವಿಸ್ತೀರ್ಣ:**

ಪೂರ್ವ ಪಶ್ಚಿಮ : 20 ಅಡಿಗಳು ಉತ್ತರ ದಕ್ಷಿಣ : 65 ಅಡಿಗಳು.

**ಒಟ್ಟು ವಿಸ್ತೀರ್ಣ:**

ಪೂರ್ವ ಪಶ್ಚಿಮ : 42 ಅಡಿಗಳು ಉತ್ತರ ದಕ್ಷಿಣ : 65 ಅಡಿಗಳು.

**ಚೆಕ್ಕುಬಂದಿ:**

ಪೂರ್ವಕ್ಕೆ : ಮಹಮದ್ ಪೀರ್‌ಸಾಬ್‌ರವರ ಮನೆ ಮತ್ತು ಗೋಡೆ ಒತ್ತು.

ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ ಗಲ್ಲಿ

ಉತ್ತರಕ್ಕೆ : ಮಹಮದ್ ಅಬ್ದುಲ್ ಗಫಾರ್‌ರವರ ಸ್ವತ್ತು.

ದಕ್ಷಿಣಕ್ಕೆ : ಕನ್ಸರ್‌ವೆನ್ಸಿ ಗಲ್ಲಿ.

ಈ ಮಧ್ಯೆ ಇರುವ ಸ್ವತ್ತು. ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಮತ್ತು ಷೀಟ್ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 650 ರಾಮನಗರಂ ಉಪ ವಿಭಾಗ, ರಾಮನಗರಂ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರ ರವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: 262:1999–2000 ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್ ಷರೀಫ್ ರೇಷ್ಮೆ ವ್ಯಾಪಾರಿಗಳು, ಮೇಳೇಕೋಟೆ, ಕನಕಪುರ ಇವರ ಸ್ಥಿರಾಸ್ತಿಯನ್ನು ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಹೆಸರಿಗೆ ವರ್ಗವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರರವರ ಪತ್ರದ ಸಂಖ್ಯೆ ಸ.ಸ.ಸ.ನಿರಾ–46:ಅಮಲ್ಜಾರಿ:07:2005–06, ದಿನಾಂಕ: 07.11.2005.

2) ಈ ಕಛೇರಿಯ ನೋಟೀಸು ಸಂಖ್ಯೆ: ಸ.ಸ.ನಿರಾ–46ಸಿ.ಇ.ಪಿ:262:1999–2000, ದಿನಾಂಕ: 14.12.2005.

ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್ ಷರೀಫ್, ರೇಷ್ಮೆ ವ್ಯಾಪಾರಿಗಳು, ಮೇಳೇಕೋಟೆ, ಕನಕಪುರ ರವರು ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರರವರಲ್ಲಿ ಸಾಲ ಪಡೆದು ಸುಸ್ತಿಯಾದ ಪ್ರಯುಕ್ತ 28.01.1998 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: 262:99–2000ರ ರೀತ್ಯ ಕ್ರಮ ಜರುಗಿಸಿ ಸಂಘಕ್ಕೆ ಬರಬೇಕಾದ ಬಾಕಿ ರೂ.3,08,744–00 (ರೂಪಾಯಿ ಮೂರು ಲಕ್ಷದ ಎಂಟು ಸಾವಿರದ ಏಳು ನೂರ ನಲವತ್ತನಾಲ್ಕು ಮಾತ್ರ) ಗಳನ್ನು ವಸೂಲಿ ಮಾಡಲು ಸದರಿ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್‌ರವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 10.08.2005 ರಂದು ನಿಗದಿಗೊಳಿಸಿ ಪ್ರಚಾರ ಪಡಿಸಲಾಗಿತ್ತು. ಸದರಿ ದಿನಾಂಕದಂದು ಹರಾಜಿನಲ್ಲಿ ಬಿಡ್ಡುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್ ರವರಿಂದ ಸಂಘಕ್ಕೆ ಬರಬೇಕಾದ ರೂ.3,08,744–00 (ರೂಪಾಯಿ ಮೂರು ಲಕ್ಷದ ಎಂಟು ಸಾವಿರದ ಏಳು ನೂರ ನಲವತ್ತನಾಲ್ಕು ಮಾತ್ರ) ಗಳಿಗೆ ಸದರಿಯವರ ಸ್ತಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮಾರಾಟಾಧಿಕಾರಿಗಳು ಶಿಫಾರಸ್ಸಿನ ಮೇರೆಗೆ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್ ರವರ ದಿನಾಂಕ: 14.12.2005 ರಂದು ಈ ಕಛೇರಿಯಿಂದ ಅಂಚೆ ನೋಂದಣಿ ಸ್ವೀಕೃತಿ ಮೂಲಕ ನೋಟೀಸು ಜಾರಿ ಮಾಡಿ ದಿನಾಂಕ: 21.01.2006 ರಂದು ಬೆಳಿಗ್ಗೆ 11.00 ಕಛೇರಿಯಲ್ಲಿ ಹಾಜರಾಗಿ ಅವರ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ಸದರಿ ನೋಟೀಸ್ ತೀರ್ಮ ಸಾಲಗಾರರಾದ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್‌ರವರಿಗೆ ದಿನಾಂಕ: 17.01.2006 ರಂದು ತಲುಪಿರುವ ಬಗ್ಗೆ ಕನಕಪುರ ಅಂಚೆ ಕಛೇರಿಯಿಂದ ದೃಢೀಕರಿಸಲಾಗಿದೆ. ಆದರೆ ವಿಚಾರಣೆಯ ದಿನಾಂಕದಂದು ತೀರ್ಮಗಾರರು ಕಛೇರಿಗೆ ಹಾಜರಾಗಿ ಅವರ ಹೇಳಿಕೆಯನ್ನು ನೀಡಲು ವಿಫಲರಾಗಿರುತ್ತಾರೆ. ಈ ಹಿನ್ನಲೆಯಲ್ಲಿ ಸದರಿಯವರ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ ಸಂಖ್ಯೆ: ಸ.ಸ.ಸ.ನಿರಾ–46:ಆ.ವರ್ಗಾವಣೆ:02:05–06, ದಿನಾಂಕ: 18ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಶ್ರೀ ವಿ. ಗಂಗಾಧರಪ್ಪ, ಸಹಕರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್, ರೇಷ್ಮೆ ವ್ಯಾಪಾರಿ, ಮೇಳೇಕೋಟೆ, ಕನಕಪುರರವರ ಈ ಕೆಳಕಂಡ ಸ್ಥಿರ ಸ್ವತ್ತನ್ನು ದಿನಾಂಕ: 10.08.2005 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ಬರಬೇಕಾದ ರೂ.3,08,744–00 (ರೂಪಾಯಿ ಮೂರು ಲಕ್ಷದ ಎಂಟು ಸಾವಿರದ ಏಳು ನೂರ ನಲವತ್ತನಾಲ್ಕು ಮಾತ್ರ) ಗಳಿಗೆ ಹರಾಜು ಮಾಡಲು ಸದರಿ ಹರಾಜಿನಲ್ಲಿ ಬಿಡ್ಡುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಗಫಾರ್‌ಷರೀಫ್ ಬಿನ್ ರಜಾಕ್‌ಷರೀಫ್‌ರವರ ಸ್ಥಿರ ಸ್ವತ್ತನ್ನು ಈ ಕೆಳಕಂಡ ಷರತ್ತುಗಳೊಡನೆ ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ, ಇದರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ ಹಾಗೂ ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ VIII ರಂತೆ ಸ್ಥಿರಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, 2ನೇ ವಿಭಾಗಕ್ಕೆ ಸೇರಿದ ಅರ್ಕಾವತಿ ಹೊಳೆ ಹತ್ತಿರವಿರುವ ಹಳೆಯ 3297:3010 ಮತ್ತು ಹೊಸ 3649ಎ:3297ಎ ಕ್ಕೆ ಸಂಬಂಧಪಟ್ಟ ಸ್ವತ್ತು.

**ವಿಸ್ತೀರ್ಣ:**

| | | |
|---|---|---|
| ಪೂರ್ವ–ಪಶ್ಚಿಮ | : | 30 ಅಡಿಗಳು |
| ಉತ್ತರ–ದಕ್ಷಿಣ | : | 110 ಅಡಿಗಳು |
| ಪೂರ್ವ–ಪಶ್ಚಿಮ | : | 30 ಅಡಿಗಳು |
| ಉತ್ತರ ದಕ್ಷಿಣ | : | 61 ಅಡಿಗಳು |

**ಚೆಕ್ಕುಬಂದಿ:**

| | | |
|---|---|---|
| ಪೂರ್ವಕ್ಕೆ | : | ವಹಾಬ್‌ಷರೀಫ್ ರವರ ಸ್ವತ್ತು, |
| ಪಶ್ಚಿಮಕ್ಕೆ | : | ರಹೀಮ್ ಸಾಬ್ ರವರ ಸ್ವತ್ತು, |
| ಉತ್ತರಕ್ಕೆ | : | ರಸ್ತೆ, |
| ದಕ್ಷಿಣಕ್ಕೆ | : | ಅಜೀಜ್ ಷರೀಫ್ ರವರ ಸ್ವತ್ತು. |

ಈ ಮಧ್ಯೆಯ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಆರ್.ಸಿ.ಸಿ. ಕಟ್ಟಡ, ಮಂಗಳೂರು ಹೆಂಚಿನ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ಷರತ್ತುಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವು ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗೆ ಮಾರಾಟ ಹಣವನ್ನು ಸಂಘಕ್ಕೆ ಜಮಾ–ಖರ್ಚು ಮಾಡಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಡನೆ ದಿನಾಂಕ: 18.2.2006 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪ ವಿಭಾಗ, ರಾಮನಗರಂ.

**ನಮೂನೆ–VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಕಾರ್ಯದರ್ಶಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಗಫಾರ್ ಷರೀಫ್ ಬಿನ್ ರಜಾಕ್ ಷರೀಫ್, ರೇಷ್ಮೆ ವ್ಯಾಪಾರಿ, ಮೇಳೇಕೋಟೆ ಕನಕಪುರ ಇದರ ಷೆಡ್ಯೂಲ್ ಸ್ವತ್ತನ್ನು ಮಾರಾಟದ ದಿನಾಂಕ: 10.8.2005 ರಂದು ಬಹಿರಂಗ ಹರಾಜಿನಲ್ಲಿಟ್ಟು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತನ್ನು ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಭಾದ್ಯತೆಯು ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, 2ನೇ ವಿಭಾಗಕ್ಕೆ ಸೇರಿದ ಅರ್ಕಾವತಿ ಹೊಳೆ ಹತ್ತಿರವಿರುವ ಹಳೆಯ 3297:3010 ಮತ್ತು ಹೊಸ 3649ಎ:3297ಎ ಕ್ಕೆ ಸಂಬಂಧಪಟ್ಟ ಸ್ವತ್ತು.

**ವಿಸ್ತೀರ್ಣ:**

| | | |
|---|---|---|
| ಪೂರ್ವ–ಪಶ್ಚಿಮ | : | 30 ಅಡಿಗಳು |
| ಉತ್ತರ–ದಕ್ಷಿಣ | : | 110 ಅಡಿಗಳು |
| ಪೂರ್ವ–ಪಶ್ಚಿಮ | : | 30 ಅಡಿಗಳು |
| ಉತ್ತರ ದಕ್ಷಿಣ | : | 61 ಅಡಿಗಳು |

**ಚೆಕ್ಕುಬಂದಿ:**

| | | |
|---|---|---|
| ಪೂರ್ವಕ್ಕೆ | : | ವಹಾಬ್‌ಷರೀಫ್ ರವರ ಸ್ವತ್ತು, |
| ಪಶ್ಚಿಮಕ್ಕೆ | : | ರಹೀಮ್ ಸಾಬ್ ರವರ ಸ್ವತ್ತು, |
| ಉತ್ತರಕ್ಕೆ | : | ರಸ್ತೆ, |
| ದಕ್ಷಿಣಕ್ಕೆ | : | ಅಜೀಜ್ ಷರೀಫ್ ರವರ ಸ್ವತ್ತು. |

ಈ ಮಧ್ಯೆಯ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಆರ್.ಸಿ.ಸಿ. ಕಟ್ಟಡ, ಮಂಗಳೂರು ಹೆಂಚಿನ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 651 ರಾಮನಗರಂ ಉಪ ವಿಭಾಗ, ರಾಮನಗರಂ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:26:ಎಲ್‌ಎಂಸಿ:2003–04, ದಿನಾಂಕ: 24ನೇ ಫೆಬ್ರವರಿ 2006**

**ವಿಷಯ:** ಸಮಾಪನೆಯಲ್ಲಿರುವ ದೇವನಹಳ್ಳಿ ತಾಲ್ಲೂಕು ಕುರಿ ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ದೇವನಹಳ್ಳಿ, ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮ ಸಂಖ್ಯೆ: ದಿನಾಂಕ: 06.04.2004.

2) ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/34/2005–06, ದಿನಾಂಕ: 09.11.2005

**ಪ್ರಸ್ತಾವನೆ:**

ದೇವನಹಳ್ಳಿ ತಾಲ್ಲೂಕು ಕುರಿ ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ದೇವನಹಳ್ಳಿ, ಈ ಸಹಕಾರ ಸಂಘವನ್ನು ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ದೇವನಹಳ್ಳಿ ತಾಲ್ಲೂಕುರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು. ಸದರಿ ಸಂಘದ ಸದಸ್ಯರು ಸಂಘದ ಕಾರ್ಯಚಟುವಟಿಕೆ ಆರಂಭ ಮಾಡಲು ಆಸಕ್ತಿ ಹೊಂದಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿ ಸಮಾಪನಾಧಿಕಾರಿಗಳ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆರವರು ಸಂಘದ ಪುನಃಶ್ಚೇತನಕ್ಕಾಗಿ ಉಲ್ಲೇಖ(2) ರಲ್ಲಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸಂಘದ ಪುನಃಶ್ಚೇತನಕ್ಕಾಗಿ ದಿನಾಂಕ: 19.10.2005 ರಂದು ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರುಗಳ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ಹಾಲಿ ಸಂಘದಲ್ಲಿ ಇರುವ ಹಣದ ಜೊತೆ ಆರ್ಥಿಕ ಸಹಾಯಕ ಬೇಕಾಗಿದ್ದು, ಹಾಲಿ ಇರುವ ಸದಸ್ಯರು ಠೇವಣಾತಿ ನೀಡುವ ಮೂಲಕ ಸಂಘದ ಕಾರ್ಯಚಟುವಟಿಕೆ ಮಾಡಲು ತೀರ್ಮಾನಿಸಿರುತ್ತಾರೆ. ಸಂಘವು ಪುನಃಶ್ಚೇತನಗೊಂಡ ಬಳಿಕ ಇನ್ನು ಹೆಚ್ಚಿನ ಸದಸ್ಯರನ್ನು ನೋಂದಾಯಿಸಿ ಕುರಿ ಸಾಕಾಣಿಕೆದಾರರಿಗೆ ಈ ಸಂಘದ ಪ್ರಯೋಜನ ದೊರೆಯುವಂತೆ ವಿವರವಾದ ಕಾರ್ಯಕ್ರಮ ರೂಪಿಸಿಕೊಂಡು ಸಂಘದ ಶ್ರೇಯೋಭಿವೃದ್ಧಿಗೆ ಹಾಗೂ ಸಬಲೀಕರಣಕ್ಕೆ ಶ್ರಮಿಸುವ ನಿಟ್ಟಿನಲ್ಲಿ ತಾವುಗಳು ಕಾರ್ಯ ಪ್ರವೃತ್ತರಾಗುವುದಾಗಿ ಸದಸ್ಯರು ತಿಳಿಸಿರುತ್ತಾರೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸುವುದಕ್ಕೆ ಪ್ರಸ್ತಾವನೆ ಸಲ್ಲಿಸಲು ಸಭೆಯಲ್ಲಿ ತೀರ್ಮಾನಿಸಿರುತ್ತಾರೆ.

ಸಂಘದ ಸದಸ್ಯರು ಸಂಘದ ಕಾರ್ಯಚಟುವಟಿಕೆ ಆರಂಭ ಮಾಡಲು ಆಸಕ್ತಿ ಹೊಂದಿರುವುದರಿಂದ ಹಾಗೂ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ಶಿಫಾರಸ್ಸಿನನ್ವಯ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಈ ಕಛೇರಿ ಆದೇಶ ಸಂಖ್ಯೆ: ಜೆಆರ್‌ಬಿ/ಎಲ್‌ಕ್ಯೂಡಿ/25/ಎಲ್‌ಎಂಸಿ/2003-04, ದಿನಾಂಕ: 06.04.2004 ರನ್ವಯ ದೇವನಹಳ್ಳಿ ತಾಲ್ಲೂಕು ಕುರಿ ಉಣ್ಣೆ ಉತ್ಪಾದಕರ ಸಹಕಾರ ಸಂಘ ನಿಯಮಿತ, ದೇವನಹಳ್ಳಿ, ಇದನ್ನು ಸಮಾಪನೆ ಮಾಡಿ ಹೊರಡಿಸಲಾಗಿದ್ದ ಆದೇಶವನ್ನು ರದ್ದುಪಡಿಸಿ, ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿರುತ್ತೇನೆ.

**ಷರತ್ತುಗಳು:**

1) ಹಾಲಿ ಇರುವ ಸಂಘದ ಸದಸ್ಯರುಗಳಿಂದ ಹೆಚ್ಚಿನ ಠೇವಣಾತಿಗಳನ್ನು ಪಡೆಯತಕ್ಕದ್ದು.
2) ಸಂಘಕ್ಕೆ ಹೆಚ್ಚಿನ ಸದಸ್ಯರನ್ನು ನೋಂದಣಿ ಮಾಡಿಕೊಳ್ಳತಕ್ಕದ್ದು.
3) ಸಂಘದ ಅಭಿವೃದ್ಧಿಗೆ ಕಾರ್ಯಯೋಜನೆಗಳನ್ನು ರೂಪಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 24.02.2006 ರಂದು ಕಛೇರಿ ಮುದ್ರೆ ಹಾಗೂ ಸ್ವಹಸ್ತಾಕ್ಷರದೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 654

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:38:ಎಲ್‌ಎಂಸಿ:2004-05, ದಿನಾಂಕ: 28ನೇ ಫೆಬ್ರವರಿ 2006**

**ವಿಷಯ:** ಸ್ಥಗಿತಗೊಂಡಿರುವ ಗುಬ್ಬಿ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿಯಮಿತ, ಗುಬ್ಬಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರುರವರ ಪತ್ರ ಸಂಖ್ಯೆ: ಡಿಆರ್‌ಟಿ/ಡಿಎಲ್‌ಎಸ್/32/2004-05, ದಿನಾಂಕ: 25.01.2005 ಮತ್ತು 19.01.2006.

**ಪ್ರಸ್ತಾವನೆ:**

ಗುಬ್ಬಿ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿಯಮಿತ, ಗುಬ್ಬಿ, ತುಮಕೂರು ಜಿಲ್ಲೆ, ತುಮಕೂರು ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಟಿ/759, ದಿನಾಂಕ: 15.11.1994 ರನ್ವಯ ನೋಂದಣಿಯಾಗಿದ್ದು, ತಾಲ್ಲೂಕು ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುವುದಾಗಿ, ಸಂಘವು 2003-04ನೇ ಸಾಲಿನ ಸರ್ವ ಸದಸ್ಯರ ಸಭೆ ನಡೆಸದ ಕಾರಣ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31ರ ಪ್ರಕಾರ ಸಂಘಕ್ಕೆ ವಿಶೇಷಾಧಿಕಾರಿಯನ್ನು ನೇಮಿಸಿದ್ದು, ಸದರಿಯವರು ಪ್ರಭಾರವಹಿಸಿಕೊಂಡು, ದಿನಾಂಕ: 17.06.2005 ರಂದು ಸಂಘದ ಕಛೇರಿಯಲ್ಲಿ ಸಭೆಯ ನಡವಳಿಕೆ ನಡೆಸಿದ್ದು, ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಹಾಗೂ ಸಂಘದ ವತಿಯಿಂದ ಸದಸ್ಯರುಗಳಿಗೆ ಯಾವುದೇ ರೀತಿಯ ಸಾಲ ಸೌಲಭ್ಯಗಳು ದೊರೆಯದೆ ಇರುವುದರಿಂದ, ಸದಸ್ಯರುಗಳಿಗೆ ಸಂಘದ ಅಭಿವೃದ್ಧಿಯ ಬಗ್ಗೆ ಆಸಕ್ತಿ ಇರುವುದರಿಲ್ಲವಾದ್ದರಿಂದ ಸಂಘವನ್ನು ಸಮಾಪನೆಗೊಳಿಸಬೇಕೆಂದು ಸಂಘದ ವಿಶೇಷಾಧಿಕಾರಿಯು ಕೋರಿರುತ್ತಾರೆ. ಉಪನಿಬಂಧಕರು, ತುಮಕೂರು ರವರು ಸಂಘವನ್ನು ನಿಷ್ಕ್ರೀಯ ಸ್ಥಿತಿಯಲ್ಲಿಯೇ ಮುಂದುವರಿಸುವುದು ಸೂಕ್ತವಾಗಿರುವುದಿಲ್ಲವೆಂದು ಸಂಘದ ಸಮಾಪನೆಗೆ ಶಿಫಾರಸ್ಸು ಮಾಡಿ ಉಲ್ಲೇಖದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು, ಸಂಘದ ಸದಸ್ಯರುಗಳಿಗೆ ಯಾವುದೇ ರೀತಿಯ ಸಾಲ ಸೌಲಭ್ಯಗಳು ದೊರೆಯದೆ ಇರುವುದರಿಂದ ಹಾಗೂ ಸಂಘದ ಕಾರ್ಯದ ಚಟುವಟಿಕೆಗಳನ್ನು ಮುಂದುವರಿಸಲು ಯಾವುದೇ ಸದಸ್ಯರಿಗೆ ಆಸಕ್ತಿ ಇಲ್ಲದೇ ಇರುವುದರಿಂದ ಉಪನಿಬಂಧಕರು, ತುಮಕೂರುರವರ ಶಿಫಾರಸ್ಸಿನಂತೆ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್.ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಗುಬ್ಬಿ

ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿಯಮಿತ, ಗುಬ್ಬಿ, ತುಮಕೂರು, ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಗುಬ್ಬಿ ತಾಲ್ಲೂಕು, ತುಮಕೂರು ರವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾನಾಧಿಕಾರಿಯು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ, ಸಂಘದ ನೋಂದಣಿ ಸಂಖ್ಯೆ ರದ್ಧತಿಗೆ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 28.02.2006 ರಂದು ಕಛೇರಿ ಮುದ್ರೆ ಹಾಗೂ ಸ್ವಹಸ್ತಾಕ್ಷರದೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 655

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:28:ಎಲ್‌ಎಂಸಿ:2004–05, ದಿನಾಂಕ: 28ನೇ ಫೆಬ್ರವರಿ 2006**

**ವಿಷಯ:** ಹರಪನಹಳ್ಳಿ ತಾಲ್ಲೂಕು ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಹರಪನಹಳ್ಳಿ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ರವರ ಪತ್ರ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ: ಸಿಆರ್–31:04–05, ದಿನಾಂಕ: 13.12.2004 ಮತ್ತು 2.1.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸಿನ ಸಮಸಂಖ್ಯೆ ದಿನಾಂಕ: 11.1.2005.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ರವರ ಪತ್ರ ಸಂಖ್ಯೆ: ಸನಿ:ಹೆಚ್‌ಆರ್‌ಪಿ: ಸಮಾಪನೆ:153:05–06, ದಿನಾಂಕ: 30.3.2005 ಮತ್ತು 29.11.2005.

**ಪ್ರಸ್ತಾವನೆ:**

ಹರಪನಹಳ್ಳಿ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಹರಪನಹಳ್ಳಿ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ವೈ:694:1980–81, ದಿನಾಂಕ: 3.10.1980 ರನ್ವಯ ನೋಂದಣಿಯಾಗಿದ್ದು, ತಾಲ್ಲೂಕು ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಸಂಘವು ಉಪನಿಯಮಗಳಲ್ಲಿನ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲಗೊಂಡಿದ್ದು, ಸ್ಥಗಿತಗೊಂಡಿರುವುದಾಗಿ ಉಲ್ಲೇಖ (1) ರಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆರವರು ವರದಿಸಿದ್ದಾರೆ.

ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ಸ್ಥಗಿತಗೊಳಿಸಿರುವ ಬಗ್ಗೆ ಸಂಘದ ಆಡಳಿತ ಮಂಡಳಿ ಸದಸ್ಯರು ಗಮನಹರಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ವಹಿಸದಿರುವ ಬಗ್ಗೆ ಆಡಳಿತ ಮಂಡಳಿಯ ಕಾರ್ಯವೈಫಲ್ಯತೆಗಳ ಪಟ್ಟಿ ಮಾಡಿ ಸಮಾಪನೆಗೊಳಿಸುವ ಬಗ್ಗೆ ಉಲ್ಲೇಖ (2) ರಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕಾರಣ ಕೇಳಿ ನೋಟೀಸು ಜಾರಿಗೊಳಿಸಲಾಗಿದ್ದು, ಇದನ್ನು ಉಲ್ಲೇಖ (3) ರಲ್ಲಿ ಆಡಳಿತ ಮಂಡಳಿ ಸದಸ್ಯರಿಗೆ ಜಾರಿಯಾಗಿರುವ ಬಗ್ಗೆ ಸ್ವೀಕೃತಿ ಪತ್ರ ಪಡೆಯಲಾಗಿದೆ. ಸದರಿ ನೋಟೀಸಿನಲ್ಲಿ ಆಕ್ಷೇಪಣೆ ಸಲ್ಲಿಸಲು ಆಡಳಿತ ಮಂಡಳಿಯವರಿಗೆ ನೀಡಿದ್ದ 15 ದಿನಗಳ ಕಾಲಾವಕಾಶವು ಪೂರ್ಣಗೊಂಡಿದ್ದು, ತಹಲಿವರೆಗೂ ಸಂಘದ ಯಾವುದೇ ಆಡಳಿತ ಮಂಡಳಿ ಸದಸ್ಯರುಗಳು ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘದ ಕಾರ್ಯಚಟುವಟಿಕೆಗಳನ್ನು ಸಕ್ರಿಯವಾಗಿ ನಡೆಸುವ ಬಗ್ಗೆ ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗಿರುತ್ತದೆ. ಇದರಿಂದಾಗಿ ಈ ಸಂಘದ ಪುನಃಶ್ಚೇತನಕ್ಕೆ ಅವಕಾಶಗಳು ಇಲ್ಲದಿರುವುದು ಹಾಗೂ ಸಂಘವನ್ನು ಮುಂದುವರೆಸಿದಲ್ಲಿ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗುವುದಿಲ್ಲವೆಂಬ ವಿಷಯವು ಸ್ಪಷ್ಟವಾಗಿದ್ದು, ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್.ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಹರಪನಹಳ್ಳಿ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ಸಹಕಾರ ಸಂಘ ನಿಯಮಿತ, ಹರಪನಹಳ್ಳಿ, ದಾವಣಗೆರೆ, ಈ ಸಂಘವನ್ನು ಸಮಾಪನೆಗೊಳಿಸಿ ಕಲಂ 73 ರನ್ವಯ ಕೈಗಾರಿಕಾ ವಿಸ್ತೀರ್ಣಾಧಿಕಾರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾನಾಧಿಕಾರಿಯು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ, ಸಂಘದ ನೋಂದಣಿ ಸಂಖ್ಯೆ ರದ್ಧತಿಗೆ 60 (ಅರವತ್ತು) ದಿನಗಳೊಳಗಾಗಿ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 28.02.2006 ರಂದು ಕಛೇರಿ ಮುದ್ರೆ ಹಾಗೂ ಸ್ವಹಸ್ತಾಕ್ಷರದೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 656

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರ ರವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: 264:1999-2000 ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರೇಷ್ಮೆ ವ್ಯಾಪಾರಿಗಳು, ಮೇಳೇಕೋಟೆ, ಕನಕಪುರ ಇವರ ಸ್ಥಿರಾಸ್ತಿಯನ್ನು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಹೆಸರಿಗೆ ವರ್ಗವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರರವರ ಪತ್ರದ ಸಂಖ್ಯೆ ಸ.ಸ.ಸ.ನಿರಾ-46:ಅಮಲ್ಜಾರಿ:08:2005-06, ದಿನಾಂಕ: 07.11.2005.

2) ಈ ಕಛೇರಿಯ ನೋಟೀಸು ಸಂಖ್ಯೆ: ಸ.ಸ.ನಿರಾ-46ಸಿ.ಇ.ಪಿ:264:1999-2000, ದಿನಾಂಕ: 14.12.2005.

ಪ್ರಸ್ತಾವನೆ:

ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರೇಷ್ಮೆ ವ್ಯಾಪಾರಿಗಳು, ಮೇಳೇಕೋಟೆ, ಕನಕಪುರ ರವರು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರರವರಲ್ಲಿ ಸಾಲ ಪಡೆದು ಸುಸ್ತಿಯಾದ ಪ್ರಯುಕ್ತ 28.01.1998 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: 264:99-2000ರ ರೀತ್ಯ ಕ್ರಮ ಜರುಗಿಸಿ ಸಂಘಕ್ಕೆ ಬರಬೇಕಾದ ಬಾಕಿ ರೂ.2,62,609-00 (ರೂಪಾಯಿ ಎರಡು ಲಕ್ಷದ ಆರವತ್ತೆರಡು ಸಾವಿರದ ಆರು ನೂರ ಒಂಭತ್ತು ಮಾತ್ರ) ಗಳನ್ನು ವಸೂಲಿ ಮಾಡಲು ಸದರಿ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್‌ರವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 11.08.2005 ರಂದು ನಿಗದಿಗೊಳಿಸಿ ಪ್ರಚಾರ ಪಡಿಸಲಾಗಿತ್ತು. ಸದರಿ ದಿನಾಂಕದಂದು ಹರಾಜಿನಲ್ಲಿ ಬಿಡ್ದುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರವರಿಂದ ಸಂಘಕ್ಕೆ ಬರಬೇಕಾದ ರೂ.2,62,609-00 (ರೂಪಾಯಿ ಎರಡು ಲಕ್ಷದ ಆರವತ್ತೆರಡು ಸಾವಿರದ ಆರು ನೂರ ಒಂಭತ್ತು ಮಾತ್ರ) ಗಳಿಗೆ ಸದರಿಯವರ ಸ್ತಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮಾರಾಟಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರವರಿಗೆ ದಿನಾಂಕ: 14.12.2005 ರಂದು ಈ ಕಛೇರಿಯಿಂದ ಅಂಚೆ ನೋಂದಣಿ ಸ್ವೀಕೃತಿ ಮೂಲಕ ನೋಟೀಸು ಜಾರಿ ಮಾಡಿ ದಿನಾಂಕ: 21.01.2006 ರಂದು ಬೆಳಿಗ್ಗೆ 11.00 ಗಂಟೆಗೆ ಕಛೇರಿಯಲ್ಲಿ ಹಾಜರಾಗಿ ಅವರ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ಸದರಿ ನೋಟೀಸನ್ನು ಮೂಲ ಸಾಲಗಾರರು ದಿನಾಂಕ: 19.12.2005 ರಂದು ಪಡೆದಿರುವ ಬಗ್ಗೆ ಕನಕಪುರ ಅಂಚೆ ಕಛೇರಿಯಿಂದ ದೃಢೀಕರಿಸಲ್ಪಟ್ಟಿರುತ್ತದೆ. ಆದರೂ ಸಹ ಸಾಲಗಾರರು ವಿಚಾರಣೆಯ ದಿನಾಂಕದಂದು ಕಛೇರಿಗೆ ಹಾಜರಾಗಿ ಅವರ ಹೇಳಿಕೆಯನ್ನು ನೀಡಲು ವಿಫಲರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್‌ರವರ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ ಸಂಖ್ಯೆ: ಸ.ಸ.ಸ.ನಿರಾ-46:ಆ.ವರ್ಗಾವಣೆ:03:05-06, ದಿನಾಂಕ: 18ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಶ್ರೀ ವಿ. ಗಂಗಾಧರಪ್ಪ, ಸಹಕರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರೇಷ್ಮೆ ವ್ಯಾಪಾರಿ, ಮೇಳೇಕೋಟೆ, ಕನಕಪುರರವರ ಈ ಕೆಳಕಂಡ ಸ್ಥಿರ ಸ್ವತ್ತನ್ನು ದಿನಾಂಕ: 11.08.2005 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ಬರಬೇಕಾದ ರೂ.2,62,609-00 (ರೂಪಾಯಿ ಎರಡು ಲಕ್ಷದ ಆರವತ್ತೆರಡು ಸಾವಿರದ ಆರು ನೂರ ಒಂಭತ್ತು ಮಾತ್ರ) ಗಳಿಗೆ ಹರಾಜು ಮಾಡಲು ಸದರಿ ಹರಾಜಿನಲ್ಲಿ ಬಿಡ್ದುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್‌ರವರ ಸ್ಥಿರ ಸ್ವತ್ತನ್ನು ಈ ಕೆಳಕಂಡ ಷರತ್ತುಗಳೊಡನೆ ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ, ಇದರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ ಹಾಗೂ ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ VIII ರಂತೆ ಸ್ಥಿರಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, ಅರ್ಕಾವತಿ ಹೊಳೆ ಪಕ್ಕ, ಮೇಳೇಕೋಟೆಯಲ್ಲಿರುವ ಪುರಸಭಾ ಖಾತಾಸಂಖ್ಯೆ 3635ಸಿ:3288ಸಿ ಕ್ಕೆ ಸಂಬಂಧಪಟ್ಟ ಸ್ವತ್ತುಗಳು.

**ವಿಸ್ತೀರ್ಣ:**

ಪೂರ್ವ-ಪಶ್ಚಿಮ : 50 ಅಡಿಗಳು

ಉತ್ತರ-ದಕ್ಷಿಣ : 20 ಅಡಿಗಳು

**ಚೆಕ್ಕುಬಂದಿ:**

ಪೂರ್ವಕ್ಕೆ : ಅಬ್ದುಲ್ ಬಾಷಿಕ್ ರವರ ಮನೆ,

ಪಶ್ಚಿಮಕ್ಕೆ : ಸುಬನ್‌ಬೇಗ್ ರವರ ಮನೆ,

ಉತ್ತರಕ್ಕೆ : ಹಳ್ಳ

ದಕ್ಷಿಣಕ್ಕೆ : ರಸ್ತೆ.

ಈ ಮಧ್ಯೆಯ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ಷರತ್ತುಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವು ಉಪಯೋಗಿಸತಕ್ಕದ್ದು.
2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.
3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗೆ ಮಾರಾಟ ಹಣವನ್ನು ಸಂಘಕ್ಕೆ ಜಮಾ-ಖರ್ಚು ಮಾಡಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಡನೆ ದಿನಾಂಕ: 18.2.2006 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪ ವಿಭಾಗ, ರಾಮನಗರಂ.

**ನಮೂನೆ-VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಕಾರ್ಯದರ್ಶಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಸುಬಾನ್‌ಬೇಗ್ ಬಿನ್ ಲೇಟ್ ಗೌಸ್ ಬೇಗ್, ರೇಷ್ಮೆ ವ್ಯಾಪಾರಿ, ಮೆಳೇಕೋಟೆ ಕನಕಪುರ ಇದರ ಷೆಡ್ಯೂಲ್ ಸ್ವತ್ತನ್ನು ಮಾರಾಟದ ದಿನಾಂಕ: 11.08.2005 ರಂದು ಬಹಿರಂಗ ಹರಾಜಿನಲ್ಲಿಟ್ಟು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ವೆಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತನ್ನು ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಭಾದ್ಯತೆಯು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, ಅರ್ಕಾವತಿ ಹೊಳೆ ಪಕ್ಕ, ಮೆಳೇಕೋಟೆಯಲ್ಲಿರುವ ಪುರಸಭಾ ಖಾತಾಸಂಖ್ಯೆ 3635ಸಿ:3288ಸಿ ಕ್ಕೆ ಸಂಬಂಧಪಟ್ಟ ಸ್ವತ್ತುಗಳು.

**ವಿಸ್ತೀರ್ಣ:**

ಪೂರ್ವ-ಪಶ್ಚಿಮ : 50 ಅಡಿಗಳು
ಉತ್ತರ-ದಕ್ಷಿಣ : 20 ಅಡಿಗಳು

**ಚೆಕ್ಕುಬಂದಿ:**

ಪೂರ್ವಕ್ಕೆ : ಅಬ್ದುಲ್ ಬಾಷಿಕ್ ರವರ ಮನೆ,
ಪಶ್ಚಿಮಕ್ಕೆ : ಸುಬನ್‌ಬೇಗ್ ರವರ ಮನೆ,
ಉತ್ತರಕ್ಕೆ : ಹಳ್ಳ
ದಕ್ಷಿಣಕ್ಕೆ : ರಸ್ತೆ.

ಈ ಮಧ್ಯೆಯ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಹಾಗೂ ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 652 ರಾಮನಗರಂ ಉಪ ವಿಭಾಗ, ರಾಮನಗರಂ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರ ರವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: 478:2002-03 ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್, ಸುನಿತಾ ಸಾಮಿಲ್ ಹಿಂಭಾಗ, ಮೆಳೇಕೋಟೆ, ಕನಕಪುರ ಇವರ ಸ್ಥಿರಾಸ್ತಿಯನ್ನು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ರವರ ಹೆಸರಿಗೆ ವರ್ಗವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ರಾಮನಗರರವರ ಪತ್ರದ ಸಂಖ್ಯೆ ಸ.ಸ.ಸ.ನಿರಾ-46:ಅಮಲ್ಜಾರಿ:09:2005-06, ದಿನಾಂಕ: 07.11.2005.
2) ಈ ಕಛೇರಿಯ ನೋಟೀಸು ಸಂಖ್ಯೆ: ಸ.ಸ.ನಿರಾ-46ಸಿ.ಇ.ಪಿ:478:2002-03, ದಿನಾಂಕ: 14.12.2005.

**ಪ್ರಸ್ತಾವನೆ:**

ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್, ಸುನಿತಾ ಸಾಮಿಲ್ ಹಿಂಭಾಗ, ಮೆಳೇಕೋಟೆ, ಕನಕಪುರ ರವರು ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರರವರಲ್ಲಿ ಸಾಲ ಪಡೆದು ಸುಸ್ತಿಯಾದ ಪ್ರಯುಕ್ತ 17.12.1999 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: 478:2002-03ರ ರೀತ್ಯ ಕ್ರಮ ಜರುಗಿಸಿ ಸಂಘಕ್ಕೆ ಬರಬೇಕಾದ ಬಾಕಿ ರೂ.1,03,483-00 (ರೂಪಾಯಿ ಒಂದು ಲಕ್ಷದ ಮೂರು ಸಾವಿರದ ನಾಲ್ಕು ನೂರ ಎಂಭತ್ತೂರು ಮಾತ್ರ) ಗಳನ್ನು ವಸೂಲಿ ಮಾಡಲು ಸದರಿ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್ ರವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 10.08.2005 ರಂದು ನಿಗದಿಗೊಳಿಸಿ ಪ್ರಚಾರ ಪಡಿಸಲಾಗಿತ್ತು. ಸದರಿ ದಿನಾಂಕದಂದು ಹರಾಜಿನಲ್ಲಿ ಬಿಡ್ಡುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್,

ರವರಿಂದ ಸಂಘಕ್ಕೆ ಬರಬೇಕಾದ ರೂ.1,03,483–00 (ರೂಪಾಯಿ ಒಂದು ಲಕ್ಷದ ಮೂರು ಸಾವಿರದ ನಾಲ್ಕು ನೂರ ಎಂಭತ್ತಮೂರು ಮಾತ್ರ) ಗಳಿಗೆ ಅವರ ಸ್ತಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮಾರಾಟಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್, ರವರ ದಿನಾಂಕ: 14.12.2005 ರಂದು ಈ ಕಛೇರಿಯಿಂದ ನೋಟೀಸು ಜಾರಿ ಮಾಡಿ ದಿನಾಂಕ: 21.01.2006 ರಂದು ಬೆಳಿಗ್ಗೆ 11.00 ಗಂಟೆಗೆ ಕಛೇರಿಯಲ್ಲಿ ಹಾಜರಾಗಿ ಅವರ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ಸದರಿ ನೋಟೀಸನ್ನು ಮೂಲ ಸಾಲಗಾರರು ದಿನಾಂಕ: 18.12.2005 ರಂದು ಪಡೆದಿರುವ ಬಗ್ಗೆ, ಕನಕಪುರ ಅಂಚೆ ಕಛೇರಿಯಿಂದ ದೃಢೀಕರಿಸಲ್ಪಟ್ಟಿರುತ್ತದೆ. ಆದರೂ ಸಹ ಸಾಲಗಾರರು ಕಛೇರಿಗೆ ಹಾಜರಾಗಿ ಅವರ ಹೇಳಿಕೆಯನ್ನು ನೀಡಲು ವಿಫಲರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್‌ರವರ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾವಣೆ ಮಾಡುವ ಸಲುವಾಗಿ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ ಸಂಖ್ಯೆ: ಸ.ಸ.ಸ.ನಿರಾ–46:ಆ.ವರ್ಗಾವಣೆ:04:05–06, ದಿನಾಂಕ: 18ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಶ್ರೀ ವಿ. ಗಂಗಾಧರಪ್ಪ, ಸಹಕರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್ ಸುನಿತಾ ಸಾಮಿಲ್ ಹಿಂಭಾಗ, ಮೇಳೇಕೋಟೆ, ಕನಕಪುರರವರ ಈ ಕೆಳಕಂಡ ಸ್ಥಿರ ಸ್ವತ್ತನ್ನು ದಿನಾಂಕ: 10.08.2005 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ಬರಬೇಕಾದ ರೂ.1,03,483–00 (ರೂಪಾಯಿ ಒಂದು ಲಕ್ಷದ ಮೂರು ಸಾವಿರದ ನಾಲ್ಕು ನೂರ ಎಂಭತ್ತಮೂರು ಮಾತ್ರ) ಗಳಿಗೆ ಹರಾಜು ಮಾಡಲು ಸದರಿ ಹರಾಜಿನಲ್ಲಿ ಬಿಡ್ಡುದಾರರು ಯಾರೂ ಭಾಗವಹಿಸದ ಪ್ರಯುಕ್ತ ಶ್ರೀ ಖದೀರ್ ಅಹಮದ್ ಬಿನ್ ಮಹಮದ್ ಇಸಾಕ್‌ರವರ ಸ್ಥಿರ ಸ್ವತ್ತನ್ನು ಈ ಕೆಳಕಂಡ ಷರತ್ತುಗಳೊಡನೆ ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ, ಇದರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣಗೊಳಿಸಲಾಗಿದೆ ಹಾಗೂ ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ VIII ರಂತೆ ಸ್ಥಿರಸ್ವತ್ತು ವರ್ಗಾವಣೆ ಪತ್ರವನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, ರಾಮನಗರ ರಸ್ತೆ, ಮೇಳೇಕೋಟೆ, ಸುನಿತಾ ಸಾಮಿಲ್ ಹಿಂಭಾಗ ಇರುವ ಪುರಸಭಾ ಖಾತೆ ನಂ. 4996:4446ಕ್ಕೆ ಸಂಬಂಧಪಟ್ಟ ಸ್ವತ್ತು.

**ವಿಸ್ತೀರ್ಣ:**

ಪೂರ್ವ–ಪಶ್ಚಿಮ : 80 ಅಡಿಗಳು
ಉತ್ತರ–ದಕ್ಷಿಣ : 20 ಅಡಿಗಳು

**ಚೆಕ್ಕುಬಂದಿ:**

ಪೂರ್ವಕ್ಕೆ : 18 ಅಡಿ ರಸ್ತೆ,
ಪಶ್ಚಿಮಕ್ಕೆ : ಕಲ್ಲಹಳ್ಳಿ ವೆಂಕಟಪ್ಪನವರ ರಸ್ತೆ,
ಉತ್ತರಕ್ಕೆ : ಅಸಾದುಲ್ಲಾಖಾನ್‌ರವರ ಸ್ವತ್ತು,
ದಕ್ಷಿಣಕ್ಕೆ : ಅಸದುಲ್ಲಾಖಾನ್‌ರವರ ಸ್ವತ್ತು.

ಈ ಮಧ್ಯೆ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಮತ್ತು ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

**ಷರತ್ತುಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವು ಉಪಯೋಗಿಸತಕ್ಕದ್ದು.
2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡುವುದು.
3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗೆ ಮಾರಾಟ ಹಣವನ್ನು ಸಂಘಕ್ಕೆ ಜಮಾ–ಖರ್ಚು ಮಾಡಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಡನೆ ದಿನಾಂಕ: 18.2.2006 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪ ವಿಭಾಗ, ರಾಮನಗರಂ.

**ನಮೂನೆ–VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರ ಇದರ ಕಾರ್ಯದರ್ಶಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಖದೀರ್ ಅಹಮದ್ ಬಿನ್

ಮಹಮದ್ ಇಸಾಕ್ ಸುನಿತಾ ಸಾಮಿಲ್ ಹಿಂಭಾಗ, ಮೆಳೇಕೋಟೆ ಕನಕಪುರ ಇದರ ಷೆಡ್ಯೂಲ್ ಸ್ವತ್ತನ್ನು ಮಾರಾಟದ ದಿನಾಂಕ: 10.08.2005 ರಂದು ಬಹಿರಂಗ ಹರಾಜಿನಲ್ಲಿಟ್ಟು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂಬುದಾಗಿ ವಸೂಲಾಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತನ್ನು ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಭಾದ್ಯತೆಯು ಅರ್ಬನ್ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., ಕನಕಪುರಕ್ಕೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

ಕನಕಪುರ ಟೌನ್, ರಾಮನಗರ ರಸ್ತೆ, ಮೆಳೇಕೋಟೆ, ಸುನಿತಾ ಸಾಮಿಲ್ ಹಿಂಭಾಗ ಇರುವ ಪುರಸಭಾ ಖಾತೆ 4996:4446ಕ್ಕೆ ಸಂಬಂಧಪಟ್ಟ ಸ್ವತ್ತು.

**ವಿಸ್ತೀರ್ಣ:**

ಪೂರ್ವ–ಪಶ್ಚಿಮ : 80 ಅಡಿಗಳು
ಉತ್ತರ–ದಕ್ಷಿಣ : 20 ಅಡಿಗಳು

**ಚೆಕ್ಕುಬಂದಿ:**

ಪೂರ್ವಕ್ಕೆ : 18 ಅಡಿ ರಸ್ತೆ,
ಪಶ್ಚಿಮಕ್ಕೆ : ಕಲ್ಲಹಳ್ಳಿ ವೆಂಕಟಪ್ಪನವರ ರಸ್ತೆ,
ಉತ್ತರಕ್ಕೆ : ಅಸಾದುಲ್ಲಾಖಾನ್‌ರವರ ಸ್ವತ್ತು,
ದಕ್ಷಿಣಕ್ಕೆ : ಅಸದುಲ್ಲಾಖಾನ್‌ರವರ ಸ್ವತ್ತು.

ಈ ಮಧ್ಯೆಯ ಇರುವ ಸ್ವತ್ತು ಸಂಬಂಧಪಟ್ಟ ಸ್ವತ್ತಿನಲ್ಲಿ ಕಟ್ಟಿರುವ ಮಂಗಳೂರು ಹೆಂಚಿನ ಮನೆ ಮತ್ತು ಇದಕ್ಕೆ ಸಂಬಂಧಪಟ್ಟ ಖಾಲಿ ನಿವೇಶನ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪ ವಿಭಾಗ, ರಾಮನಗರಂ.

ಪಿ.ಆರ್. 653

## ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು–1

**ಸಂಖ್ಯೆ: ಆಸಾನಿ.01.ಬೆಕಂಸೂ.2006, ದಿನಾಂಕ: 1ನೇ ಮಾರ್ಚ್ 2006**

**2005ನೇ ಸಾಲಿನ ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕ ಗ್ರಾಹಕ ಬೆಲೆ ಸೂಚ್ಯಂಕಗಳ ವಾರ್ಷಿಕ ಸರಾಸರಿ**

| | |
|---|---|
| 2005ನೇ ಸಾಲಿನ ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕ ಗ್ರಾಹಕ ಬೆಲೆ ಸೂಚ್ಯಂಕದ ವಾರ್ಷಿಕ ಸರಾಸರಿ ಆಧಾರ ವರ್ಷ:(1987–88=100) | 332 |
| 1960ರ ಆಧಾರ ವರ್ಷಕ್ಕೆ ಪರಿವರ್ತಿತ ಸೂಚ್ಯಂಕ (ಪರಿವರ್ತನಾ ಅಪವರ್ತ್ಯ=8.5) | 2822 |

ಟಿಪ್ಪಣಿ: ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕ ಗ್ರಾಹಕ ಬೆಲೆ ಸೂಚ್ಯಂಕದ ವಾರ್ಷಿಕ ಸರಾಸರಿ 2005ನೇ ಕ್ಯಾಲೆಂಡರ್ ವರ್ಷಕ್ಕೆ ತೂಕದ ಸರಾಸರಿಯಾಗಿದ್ದು, ಇದನ್ನು ರಾಜ್ಯದ 16 ಕೇಂದ್ರಗಳ ಮಾಸಿಕ ತೂಕದ ಸರಾಸರಿ ಸೂಚ್ಯಂಕದ ಆಧಾರದ ಮೇಲೆ ಲೆಕ್ಕ ಹಾಕಲಾಗಿದೆ.

**ಈ 16 ಕೇಂದ್ರಗಳು ಯಾವುದೆಂದರೆ:–**

**ಕೇಂದ್ರ ಸರಣಿ:** 1) ಬೆಂಗಳೂರು, 2) ಬೆಳಗಾವಿ, 3) ಹುಬ್ಬಳ್ಳಿ–ಧಾರವಾಡ, 4) ಮಡಿಕೇರಿ,

**ರಾಜ್ಯ ಸರಣಿ:** 5) ಬಳ್ಳಾರಿ, 6) ಭದ್ರಾವತಿ, 7) ದಾವಣಗೆರೆ, 8) ದಾಂಡೇಲಿ, 9) ಗುಲ್ಬರ್ಗಾ, 10) ಹರಿಹರ, 11) ಹಾಸನ, 12) ಮಂಡ್ಯ, 13) ಮಂಗಳೂರು, 14) ಮೈಸೂರು, 15) ರಾಯಚೂರು ಮತ್ತು 16) ತುಮಕೂರು

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು.

## DIRECTORATE OF ECONOMICS AND STATISTICS, M.S. BUILDING, BANGALORE-01

**No: DES-01-PWX-2006, Dated: 1st March 2006**

**Karnataka State annual average Consumer Price Index for industrial workers**

| | |
|---|---|
| For the year 2005 Karnataka State annual average Consumer Price Index for Industrial Workers (Base-1987-88=100) | 332 |
| Index converted to 1960 Base (Linking factor=8.5) | 2822 |

**Note:** Karnataka State annual average consumer price index is a weighted average for the calendar year 2005 computed on the basis of State monthly weighted average index of 16 Centres.

**The 16 Centres are:-**

**Central Series:** 1) Bangalore, 2) Belgaum, 3) Hubli-Dharwar, 4) Mercara,

**State Series:** 5) Bellary, 6) Bhadravathi, 7) Davanagere, 8) Dandeli, 9) Gulbarga, 10) Harihar, 11) Hassan, 12) Mandya, 13) Mangalore 14) Mysore, 15) Raichur and 16) Tumkur.

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು.

ಪಿ.ಆರ್. 694

## IN THE COURT OF THE 7TH ADDL. CHIEF METROPOLITAN MAGISTRATE, BANGALORE CITY

## NOTIFICATION NO. GT.2507/05, Dated: 29th December 2005

It is notified for information of the general public that the following vehicle is with the custody of Rajagopalanagara Police Station as unclaimed. Hence the Public who are interested may claim the vehicles with the required informations with-in 6 months from the date of this notification, failing which the vehicle will be forfeited to state will be sold in the public action.

| | DETAILS OF VEHICLES | CRIMES NO. | P.F.NO. |
|---|---|---|---|
| 1) | BAJAJ CHETAK SCOOTER<br>No. C.A.C. 9024, CHASSIS No-8105145575<br>ENGINE No-B8106177385 | 392/04 | 49/04 |
| 2) | KINETIC HONDA DX<br>KA-02-EA-4357, CHASSIS NO-IAF B007418<br>ENGINE NO-007463 NIEB | 851/04 | 119/04 |
| 3) | LUNA T.F.R.<br>C.A.I. 3228, CHASSIS NO-NIL, ENGINER NO-KE 291113 | 852/04 | 120/04 |
| 4) | HERO PUCH<br>KA-10-E-1918, CHASSIS NO- CB2115144,<br>ENGINE NO-CB218829 | 867/04 | 123/04 |
| 5) | LUNA KINETIC<br>CAQ-5587, CHASSIS NO-NIL, ENGINE NO- KE 505150 | 868/04 | 124/04 |
| 6) | MARUTI 800 CAR<br>KA0-17-M-1789, CHASSIS NO-SB308 AN756719,<br>ENGINE NO-1142906 | 963/04 | 134/04 |
| 7) | SUZUKI SAMURAI<br>KA-03-U-3806, CHASSIS NO-852591, ENGINE NO-806759 | 1317/04 | 197/04 |
| 8) | SUZUKI MAX 100<br>KA-01-R-5325, CHASSIS NO- 1001F533505,<br>ENGINE NO-1001M583544 | 1363(A)/04 | 208/04 |
| 9) | TWO PAIR OF SILVER<br>ONE PAIR SILVER KUMKUM-BHARNI<br>ONE PAIR SILVER HANGINGS<br>ONE PAIR SILVER LEG RINGS<br>TWO WRIST WATCHES | 1305/05 | 195/05 |
| 10) | SUZUKI SAMURAI<br>KA-03-K-6473, CHASSIS NO-7811F886584,<br>ENGINE NO-7811A0421466 | CR.NO.87/04 | 92/04 |
| 11) | BAJAJ CHETAK SCOOTER,<br>KA-02-H-1944, CHASSIS NO-F06DE235710,<br>ENGINE NO-MO6DE2221552 | CR.NO.87/04 | 92/04 |
| 12) | T.V.S.-50 XL<br>KA-05-H-1700, CHASSIS NO-A203F604101,<br>ENGINE NO-AX203A0602777 | CR.NO.87/04 | 92/04 |
| 13) | BAJAJ SCOOTER<br>CBI-492, CHASSIS NO-03C107013574,<br>ENGINE NO-03E107013173 | CR.NO.87/04 | 92/04 |

VII Addi, Chief Metropolitan Magistrate,
Bangalore City.

P.R. 665

## ವಸತಿ ಇಲಾಖೆ

### ಅಧಿಸೂಚನೆ ಸಂಖ್ಯೆ: ವಇ 106 ಕೊಮಂಇ 2005, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2006

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಬೆಂಗಳೂರು ನಗರದ ವಿಧಾನಸಭಾ ಕ್ಷೇತ್ರದಲ್ಲಿ ಬರುವ ಇಂದಿರಾ ಕಾಲೋನಿ ಅತ್ತಿಗುಪ್ಪೆ ಕೊಳಚೆ ಪ್ರದೇಶವನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆರವರು ತಮ್ಮ ಅಧಿಸೂಚನೆ ಸಂಖ್ಯೆ: ಹೆಚ್‌ಎಂಎ/239/ಎಂಸಿಎಸ್/77, ದಿನಾಂಕ: 9.12.1977 ರಲ್ಲಿ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ 33 ರಂತೆ) ಕಲಂ 3(1) ರಂತೆ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಅಧಿನಿಯಮ ಕಲಂ 17 ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ. ಆದ್ದರಿಂದ ಸಂಬಂಧಿಸಿದವರಿಗೆ/ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ ಆಸಕ್ತಿಯುಳ್ಳವರು ಭೂ ಆಸಕ್ತಿಯುಳ್ಳವರು ಭೂ ಸ್ವಾಧೀನ ಮಾಡಬಾರದೆಂಬುದಕ್ಕೆ ಕಾರಣ/ಆಕ್ಷೇಪಣೆ/ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕಟವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಕಾಸಸೌಧ, ಬೆಂಗಳೂರು-1 ಇವರಿಗೆ ಸಲ್ಲಿಸಬಹುದು.

**ಷೆಡ್ಯೂಲ್**

| ಕೊಳಚೆ ಪ್ರದೇಶದ ವಿವರ | ಪ್ರದೇಶ | | ಚೆಕ್ಕುಬಂದಿ |
|---|---|---|---|
| | ಸಿಟಿಎಫ್ ಸಂಖ್ಯೆಗಳು ಅಥವಾ ಸರ್ವೆ ನಂಬರ್ | ಅಂದಾಜು ವಿಸ್ತೀರ್ಣ ಎ.ಗುಂ. | |
| ಬೆಂಗಳೂರು ಉತ್ತರ ತಾಲ್ಲೂಕಿನ ಕೆಂಪಾಪುರ ಅಗ್ರಹಾರ ಗ್ರಾಮದ ಇಂದಿರಾ ಕಾಲೋನಿಯ ಸರ್ವೆ ನಂ.336/2ಎ3 (ಕಾರ್ಡ್ ರೋಡ್) – ಅತ್ತಿಗುಪ್ಪೆ ಗ್ರಾಮಕ್ಕೆ ಸೇರಿದಂತೆ | ಕೆಂಪಾಪುರ ಅಗ್ರಹಾರ ಗ್ರಾಮದ ಸರ್ವೆ ನಂ.336/2ಎ3 | 3.36 | ಪೂರ್ವ: ಸರ್ವೆ ನಂಬರ್ 333 ಮತ್ತು 335<br>ಪಶ್ಚಿಮ: ಸರ್ವೆ ನಂಬರ್ 336/2ಎ3 ರಲ್ಲಿನ ಉಳಿದ ಜಾಗ<br>ಉತ್ತರ: ಸರ್ವೆ ನಂಬರ್ 336/2ಎ3 ಮತ್ತು 335 ರಲ್ಲಿ ಉಳಿದ ಜಾಗ<br>ದಕ್ಷಿಣ: ದಿವಟಿಗೇರಮ್ಮನ ಹಳ್ಳಿ ಗಡಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 658

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## ವಸತಿ ಇಲಾಖೆ

### ಅಧಿಸೂಚನೆ ಸಂಖ್ಯೆ: ವಇ 97 ಕೊಮಂಇ 2005, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2006

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಬೆಂಗಳೂರು ನಗರದಲ್ಲಿರುವ ಬಿನ್ನಿಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕನಕನಗರ (ಮಾರೇನಹಳ್ಳಿ), ಕೆಂಪಾಪುರ ಕೊಳಚೆ ಪ್ರದೇಶವನ್ನು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ತಮ್ಮ ಅಧಿಸೂಚನೆ ಸಂಖ್ಯೆ: ಕೆಎಸ್ಎ ಸಿಆರ್.39/90-9, ದಿನಾಂಕ: 29.9.1992 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 (1974ರ ಕರ್ನಾಟಕ ಕಾಯ್ದೆ 33 ರಂತೆ) ಕಲಂ 3(1) ರಂತೆ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಅಧಿನಿಯಮ ಕಲಂ 17 ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ. ಆದ್ದರಿಂದ ಸಂಬಂಧಿಸಿದವರಿಗೆ/ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ ಆಸಕ್ತಿಯುಳ್ಳವರು ಭೂ ಆಸಕ್ತಿಯುಳ್ಳವರು ಭೂ ಸ್ವಾಧೀನ ಮಾಡಬಾರದೆಂಬುದಕ್ಕೆ ಕಾರಣ/ಆಕ್ಷೇಪಣೆ/ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕಟವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಕಾಸಸೌಧ, ಬೆಂಗಳೂರು-1 ಇವರಿಗೆ ಸಲ್ಲಿಸಬಹುದು.

**ಷೆಡ್ಯೂಲ್**

| ಕೊಳಚೆ ಪ್ರದೇಶದ ವಿವರ | ಭೂ ಮಾಲೀಕರ ಹೆಸರು | ಪಿ.ಟಿ.ಎಸ್/ ಸರ್ವೆ ನಂ. | ವಿಸ್ತೀರ್ಣ ಎ-ಗುಂ. | ಚೆಕ್ಕುಬಂದಿ |
|---|---|---|---|---|
| ಕನಕನಗರ ಸ್ಲಂ ಮಾರೇನಹಳ್ಳಿ ಕೆಂಪಾಪುರದ ಸಮೀಪ | 1. ಇಂಡಸ್ಟ್ರಿಯಲ್ ವರ್ಕ್‌ಶಾಪ್ ಹೆಚ್‌ಬಿಸಿಎಸ್ ಲಿ. | 381 | 0.05 | ಪೂರ್ವ: ಸರ್ವೆ ನಂ.350/4<br>ಪಶ್ಚಿಮ: ಸರ್ವೆ ನಂ.381 |
| | 2. ದೊಡ್ಡಯ್ಯ ಸನ್ ಆಫ್ ಹನುಮಂತಪ್ಪ | 382/3 | 0.07 | ಉತ್ತರ: ಸರ್ವೆ ನಂ.381 ಮತ್ತು ಸರ್ವೆ ನಂ.382/4 |
| | 3. ಹುಚ್ಚಪ್ಪ ಸನ್ ಆಫ್ ಸುಬ್ಬಣ್ಣ | 382/4 | 1.04 | ದಕ್ಷಿಣ: ಆರ್.ಪಿ.ಆಫ್ ಸರ್ವೆ ನಂ.382/4 |
| | | **ಒಟ್ಟು** | **1.16** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 659

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಸಂಖ್ಯೆ: ಎಲ್.ಎನ್.ಡಿ(ಎನ್)ಸಿ.ಆರ್.96/2005-06, ದಿನಾಂಕ: 4ನೇ ಮಾರ್ಚ್ 2006**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗಸಂದ್ರ ಗ್ರಾಮದ ಸ.ನಂ.47 ರಲ್ಲಿ 0.03 1/2 ಗುಂಟೆ ಪ್ರದೇಶವನ್ನು ಶಾಲೆ ಕಟ್ಟಡ ಉದ್ದೇಶಕ್ಕೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ:ಸಿ.ಆರ್:242/05-06 ದಿನಾಂಕ: 17.2.2006.

ಕನ್ನಡ ಯುವಕರ ಕ್ಷೇಮಾಭಿವೃದ್ಧಿ ಸಂಘ (ನೋಂ) ರವರು ದಿನಾಂಕ: 7.10.2005 ರಂದು ಮನವಿ ಸಲ್ಲಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗಸಂದ್ರ ಗ್ರಾಮದ ಸ.ನಂ.47 ರಲ್ಲಿ 0.05 ಗುಂಟೆ ಸರ್ಕಾರಿ ಜಮೀನು ಲಭ್ಯವಿದ್ದು ಇದನ್ನು ಸರ್ಕಾರಿ ಶಾಲೆಗಾಗಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಮನವಿಯಲ್ಲಿನ ಅಂಶಗಳ ಬಗ್ಗೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರಿಂದ ಉಲ್ಲೇಖದ ಪತ್ರದಂತೆ ವರದಿ ಪಡೆಯಲಾಗಿದ್ದು ವರದಿಯಂತೆ ನಾಗಸಂದ್ರ ಸ.ನಂ.47 ರಲ್ಲಿ 0.05 ಗುಂಟೆ ಸರ್ಕಾರಿ ಕಲ್ಯಾಣಿ ಜಮೀನಾಗಿದ್ದು ಇದರಲ್ಲಿ ಶ್ರೀಮತಿ ಶಿವಮ್ಮ ಎಂಬುವರು 0.01 1/2 ಗುಂಟೆ ಪ್ರದೇಶದಲ್ಲಿ ಅನಧಿಕೃತವಾಗಿ ಮನೆಯನ್ನು ಕಟ್ಟಿಕೊಂಡು ಸಕ್ರಮಗೊಳಿಸಲು 94ಸಿ ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಲಾಗಿದ್ದು ಬಾಕಿ ಉಳಿದ 0.03 1/2 ಗುಂಟೆ ಜಮೀನಿನಲ್ಲಿ ಇರುವ ಕಲ್ಯಾಣಿಯು ಶಿಥಿಲವಾಗಿದ್ದು ಇದನ್ನು ಶಾಲೆಯ ಕಟ್ಟಡವನ್ನು ಕಟ್ಟುವ ಸಲುವಾಗಿ ಕಾಯ್ದಿರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಯಶವಂತಪುರ ಹೋಬಳಿ, ನಾಗಸಂದ್ರ ಗ್ರಾಮ ಸ.ನಂ.47 ರಲ್ಲಿರುವ 0.03 ಗುಂಟೆ ಜಮೀನನ್ನು ಸರ್ಕಾರಿ ಶಾಲೆಯ ಕಟ್ಟಡಕ್ಕಾಗಿ ಕಾಯ್ದಿರಿಸಲು ಈ ಕೆಳಕಂಡಂತೆ ಆದೇಶಿಸಿದೆ.

ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ನಾಗಸಂದ್ರ ಗ್ರಾಮದ ಸ.ನಂ.47 ರಲ್ಲಿ 0.03 1/2 ಗುಂಟೆ ಸರ್ಕಾರಿ ಕಲ್ಯಾಣಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಶಾಲೆಯ ಕಟ್ಟಡವನ್ನು ಕಟ್ಟುವ ಸಲುವಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ ಮತ್ತು ಸದರಿ ಜಮೀನಿನ ಉಸ್ತುವಾರಿಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ವಿಭಾಗ ರವರು ನೋಡಿಕೊಳ್ಳಲು ಆದೇಶಿಸಿದೆ.

**ಷರತ್ತುಗಳು:**

1) ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಸಆರ್ವಜನಿಕ ಶಿಕ್ಷಣ ಇಲಾಖೆಗೆ ವರ್ಗಾಯಿಸತಕ್ಕದ್ದು.
2) ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.
3) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ಪಿ.ಆರ್. 657 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಎಸ್.ಸಿ. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ ಸಮುದಾಯ ಆರೋಗ್ಯ ಕೇಂದ್ರ, ಬಸವನಬಾಗೇವಾಡಿ, ಬಿಜಾಪುರ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖೆ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(15) ಸಿಆರ್25:2003-04, ದಿನಾಂಕ: 15-3-
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(15) ಸಿಆರ್25:03-04, ದಿ: 22.7.2004.
3) ವಿಚಾರಣಾ ವರದಿಯ ಸಂಖ್ಯೆ: ವಿಅ:ವಿಚಾರಣೆ:ಎನ್‌ಜಿ:7:04-05, ದಿನಾಂಕ: 29.7.2005.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(15)ಸಿಆರ್25: 03-04, ದಿನಾಂಕ: 5.10.2005 ಮತ್ತು 12.12.2005.
5) ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 28.12.2005.

**ಪ್ರಸ್ತಾವನೆ:**

ಶ್ರೀ ಎಸ್.ಸಿ. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಹೊನ್ನುಟಗಿ, ಬಿಜಾಪೂರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 10.4.1992 ರಿಂದ 29.1.2004 ಅನಧಿಕೃತ ಗೈರು ಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, (ಜಾಗೃತ ಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (4) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (5) ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(15)ಸಿಆರ್:25:03-04, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2006**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಎಂ.ಜಿ. ಪ್ರಸಾದ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಎಸ್.ಸಿ. ಹಿರೇಮಠ, ದ್ವಿತೀಯ ದರ್ಜೆ ಸಹಾಯಕ, ಸಮುದಾಯ ಆರೋಗ್ಯ ಕೇಂದ್ರ, ಬಸವನ ಬಾಗೇವಾಡಿ ಇವರು 10.04.92 ರಿಂದ 29.01.2004 ರವರೆಗೆ ಸೇವೆಗೆ ಅನಧಿಕೃತ ಗೈರು ಹಾಜರಿ ಆರೋಪಕ್ಕೆ

ದಂಡನೆಯಾಗಿ ಸದರಿ ನಿಯಮ 8(vii)ರ ಪ್ರಕಾರ ದಿನಾಂಕ: 1.3.2006 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಎಂ.ಜಿ. ಪ್ರಸಾದ್**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 660

## ಜಲಸಂಪನ್ಮೂಲ ಇಲಾಖೆ

## ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ–2000

## ಭಾಗ–1

ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಧಾರವಾಡ ಮಾಹಿತಿ ಹಕ್ಕು ಅಧಿನಿಯಮ–2000ರ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು. (ರಜಾ ದಿನಗಳನ್ನು ಹೊರತುಪಡಿಸಿ)

2) ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿ

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಪದನಾಮ | ನಿರ್ವಹಿಸುತ್ತಿರುವ ಉಸ್ತುವಾರಿ ಕೆಲಸಗಳು |
|---|---|---|---|
| 1) | ಶ್ರೀಮತಿ ವಿಜಯಾ ಹೆಚ್.ಎಂ. | ತಾಂತ್ರಿಕ ಸಹಾಯಕರು | ತಾಂತ್ರಿಕ ಶಾಖೆಯ ಉಸ್ತುವಾರಿ |
| 2) | | ಸಹಾಯಕ ಇಂಜಿನೀಯರರು | ಯೋಜನಾ ಶಾಖೆಯ ಕಾರ್ಯನಿರ್ವಹಣ |
| 3) | ಶ್ರೀಮತಿ ಆರ್.ಎ. ಜಕ್ಕಲಿ | ಕಿರಿಯ ಇಂಜಿನೀಯರು | – ಸದರ – |
| 4) | ಶ್ರೀ ವ್ಯಾಸರಾಜ ಟಿ. | ಅಧೀಕ್ಷಕರು | ಆಡಳಿತ ಶಾಖೆಯ ಉಸ್ತುವಾರಿ. |
| 5) | ಶ್ರೀ ಎ.ಜಿ. ಅಶೋಕ | ಲೆಕ್ಕ ಅಧೀಕ್ಷಕರು | ಲೆಕ್ಕ ಪತ್ರಗಳ ಉಸ್ತುವಾರಿ |
| 6) | ಶ್ರೀ ಆರ್.ಎಚ್. ಶೇಖ್ | ಪ್ರಥಮ ದರ್ಜೆ ಉಗ್ರಾಣ ಪಾಲಕರು | ಉಗ್ರಾಣ ಶಾಖೆಯ ಉಸ್ತುವಾರಿ |

**ಸಕ್ಷಮ ಪ್ರಾಧಿಕಾರಿ**

| ಅಧಿಕಾರಿಯ ಹೆಸರು | ಪದನಾಮ |
|---|---|
| 1) ಶ್ರೀ ಜಿ.ಎ. ವಾಲಿ | ಕಾರ್ಯನಿರ್ವಾಹಕ ಅಭಿಯಂತರು |

3) ಮಾಹಿತಿಯನ್ನು 15 ದಿನಗಳ ಒಳಗೆ ನೀಡಿದಿದ್ದ ಪಕ್ಷದಲ್ಲಿ ಮೇಲ್ಮನವಿ ಸಲ್ಲಿಸಬೇಕಾದ ಅಧಿಕಾರಿಯ ವಿವರಗಳು.

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಕೆ. ಬಾಲಕೃಷ್ಣ | ಅಧೀಕ್ಷಕ ಅಭಿಯಂತರು |

4) ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ.

5) ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತದೆ.

ಕಾರ್ಯನಿರ್ವಾಹಕ ಅಭಿಯಂತರು,
ಸಣ್ಣ ನೀರಾವರಿ ವಿಭಾಗ, ಧಾರವಾಡ.

## ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ–2000

## ಭಾಗ–2

ಈ ಕಛೇರಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಕೈಕೊಳ್ಳಲಾದ ಅಭಿವೃದ್ಧಿ ಕಾರ್ಯಕ್ರಮಗಳ ವಿವರ.

1) ಸಣ್ಣ ನೀರಾವರಿ ವಿಭಾಗ, ಧಾರವಾಡ ವ್ಯಾಪ್ತಿ, ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಗಳು

2) ಸಣ್ಣ ನೀರಾವರಿ ವಿಭಾಗ, ಧಾರವಾಡ ಅಡಿಯಲ್ಲಿ 04 ಉಪ ವಿಭಾಗಗಳು ಕೆಲಸ ನಿರ್ವಹಿಸುತ್ತಿರುವ ಧಾರವಾಡ:ಶಿರಹಟ್ಟಿ:ರಾಣೇಬೆನ್ನೂರು:ಹಾನಗಲ್ ಉಪ ವಿಭಾಗಗಳಿಗೆ ಸೀಮಿತಗೊಂಡಿದೆ.

ಅ) ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಗಳಿಗೆ ಸಂಬಂಧಿಸಿದ 40 ಹೆಕ್ಟರ್‌ಗಿಂತ ಹೆಚ್ಚು ಹಾಗೂ 2000 ಹೆಕ್ಟರ್ ಒಳಗೆ ಇರುವ ಕೆರೆಗಳು ಏತ ನೀರಾವರಿ ಯೋಜನೆಗಳು ಬಂಧಾರಗಳು ಬ್ಯಾರೇಜುಗಳ ನಿರ್ಮಾಣ.

ಆ) ಅಸ್ಥಿತ್ವದಲ್ಲಿ ಇರುವ ಕಾಮಗಾರಿಗಳ ನಿರ್ವಹಣೆ ಹಾಗೂ ದುರಸ್ತಿ.

ಇ) ಆರ್.ಐ.ಡಿ.ಎಫ್. (ನಬಾರ್ಡ್) ಯೋಜನೆಅಡಿಯಲ್ಲಿ ಕೆರೆಗಳ ಬ್ಯಾರೇಜುಗಳ ಹಾಗೂ ಏತ ನೀರಾವರಿ ಯೋಜನೆಗಳ ನಿರ್ಮಾಣ ಹಾಗೂ ಏತ ನೀರಾವರಿ ಯೋಜನೆಗಳ ನಿರ್ಮಾಣ ಹಾಗೂ ಆಯ್ದ ಕೆರೆಗಳನ್ನು ಅಭಿವೃದ್ಧಿ ಪಡಿಸುವುದು.

ಈ) ಮೂರು ಜಿಲ್ಲೆಗಳಲ್ಲಿ ಹರಿಯುವ ನದಿ ಹಳ್ಳಗಳಿಂದ ನೀರನ್ನು ಎತ್ತಲು ರೈತರಿಗೆ ಅನುಮತಿಯನ್ನು ನೀಡುವುದು.

ಉ) ಇನ್ನಿತರ ಸಣ್ಣ ನೀರಾವರಿ ಇಲಾಖೆಗೆ ಸಂಬಂಧಪಟ್ಟಂತೆ ಎಲ್ಲ ಕಾರ್ಯಗಳನ್ನು ನಿರ್ವಹಿಸುವುದು.

ಊ) ಅಸ್ತಿತ್ವದಲ್ಲಿ ಇರುವ ಕಾಮಗಾರಿಗಳ ನಿರ್ವಹಣೆ ಹಾಗೂ ದುರಸ್ತಿ.

ಎ) ಕೆರೆಗಳನ್ನು ಅಭಿವೃದ್ಧಿ ಪಡಿಸುವುದು.

ಕಾರ್ಯನಿರ್ವಾಹಕ ಅಭಿಯಂತರು,
ಸಣ್ಣ ನೀರಾವರಿ ವಿಭಾಗ, ಧಾರವಾಡ.

ಪಿ.ಆರ್. 662

**ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಪ್ರಕಟಣೆ ಸಂಖ್ಯೆ: ಕಾಇ:ಶಿವಿಶಿ:ರೆಸ:ಸಂಚಾರ ನಿಷೇದ:2005-06, ದಿನಾಂಕ: 13ನೇ ಮಾರ್ಚ್ 2006**

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಪಡುಬಿದ್ರಿ-ಚಿಕ್ಕಲಗೊಡು ರಾಜ್ಯ ಹೆದ್ದಾರಿ ಸಂಖ್ಯೆ 1ರ (ತೀರ್ಥಹಳ್ಳಿಯಿಂದ ಆಗುಂಬೆ ಮುಖಾಂತರ ಉಡುಪಿ/ಕಾರ್ಕಳ) ಕಿ.ಮೀ. 76.20 ರಿಂದ 78.60 ಕಿ.ಮೀ.ನಲ್ಲಿ (ಆಗುಂಬೆ ಘಾಟ್) ಭಾರಿ ವಾಹನ ಸಂಚಾರಕ್ಕೆ ಯೋಗ್ಯವಾಗಿಲ್ಲದಿರುವುದರಿಂದ ರಾಜ್ಯ ಹೆದ್ದಾರಿ ಅಧಿನಿಯಮ 1964ರ ಸೆಕ್ಷನ್ 51 ರಲ್ಲಿ ದತ್ತವಾದ ಅಧಿಕಾರದಂತೆ, ಪಿ.ಆರ್. ಗಿರಿಯಪ್ಪ ಕಾರ್ಯಪಾಲಕ ಅಭಿಯಂತರರು ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ ಶಿವಮೊಗ್ಗ ಆದ ನಾನು ಮುಂದಿನ ಆದೇಶದವರೆಗೆ ಈ ರಸ್ತೆಯ ಮೇಲೆ ಭಾರಿ ವಆಹನ ಸಂಚಾರವನ್ನು ಕೂಡಲೇ ಜಾರಿಗೆ ಬರುವಂತೆ ನಿಷೇದಿಸಿರುತ್ತೇನೆ.

ಸಾರ್ವಜನಿಕರು ಬದಲಿ ರಸ್ತೆಗಳಾದ ತೀರ್ಥಹಳ್ಳಿ-ಮಾಸ್ತಿಕಟ್ಟೆ-ಕುಂದಾಪುರ (ರಾಜ್ಯ ಹೆದ್ದಾರಿ ಸಂಖ್ಯೆ 52) ಮುಖಾಂತರ ಸೇರುವ ರಸ್ತೆಯಲ್ಲಿ ಸಂಚರಿಸಬೇಕಾಗಿ ಕೋರಲಾಗಿದೆ.

ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ
ಪಿ.ಆರ್. 661 ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ**

**ಅಧಿಸೂಚನೆ ಸಂಖ್ಯೆ: ತಾಸಕ/ಸಿಬ್ಬಂದಿ-1/ಸಿ.ಆರ್. /2005-06, ದಿನಾಂಕ: 2ನೇ ಡಿಸೆಂಬರ್ 2005**

**ವಿಷಯ:** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005 (ಕೇಂದ್ರದ ಅಧಿನಿಯಮ 22)ನ್ನು ಜಾರಿಗೆ ತರುವ ಕುರಿತು.

1. **ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಮತ್ತು ಸಮರ್ಪಕವಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ 2005) ರನ್ವಯ ಸೆಕ್ಷನ್ 5(1), 5(2) ಹಾಗೂ 19(1) ರಲ್ಲಿಯ ಸೂಚನೆಯಂತೆ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯನ್ನು "ಸಾರ್ವಜನಿಕ ಪ್ರಾಧಿಕಾರ" ವೆಂದು ಹಾಗೂ ಸದರ ಕಛೇರಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಮೇಲ್ಮನವಿ ಪ್ರಾಧಿಕಾರಿ" ಗಳನ್ನು ನೇಮಕ ಮಾಡಿ ಒಂದು ಅಧಿಸೂಚಿಯನ್ನು ಹೊರಪಡಿಸಬೇಕಾಗಿದೆ.

1. **ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಕಲಘಟಗಿ ಇವರು ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕ ಪಂಚಾಯತ ಕಲಘಟಗಿ ಇವರ ಮೇಲ್ವಿಚಾರಣೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರಿಗೆ ಸಹಾಯಕರಾಗಿ ಈ ಕೆಳಗಿನಂತೆ ಸಿಬ್ಬಂದಿ ವರ್ಗ ಕಾರ್ಯ ನಿರ್ವಹಿಸುತ್ತದೆ.**

| | | |
|---|---|---|
| 1 | ಕಛೇರಿ ಅಧೀಕ್ಷರು | 01 ಹುದ್ದೆ |
| 2 | ಪ್ರಥಮ ದರ್ಜೆ ಸಹಾಯಕರು | 01 ಹುದ್ದೆ |
| 3 | ದ್ವಿತೀಯ ದರ್ಜೆ ಸಹಾಯಕರು | 01 ಹುದ್ದೆ |
| 4 | ಬೆರಳಚ್ಚುಗಾರರು | 01 ಹುದ್ದೆ |
| 5 | ಸಿಪಾಯಿ | 01 ಹುದ್ದೆ |

2. **ಈ ಕಛೇರಿ ಅಧೀನದಲ್ಲಿ ಬರುವ ಸಂಸ್ಥೆಗಳ ವಿವರ ಈ ಕೆಳಗಿನಂತೆ ಇರುತ್ತದೆ.**

| | | |
|---|---|---|
| 1 | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಕಲಘಟಗಿ. | 50 |
| 2 | ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಕಲಘಟಗಿ. | 50 |
| 3 | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಸೂರಶೆಟ್ಟಿಕೊಪ್ಪ. | 65 |
| 4 | ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಮಿಶ್ರೀಕೋಟಿ. | 35 |

3. **ಈ ಕಛೇರಿ ಅಧೀನದಲ್ಲಿ ಬರುವ ಸಂಸ್ಥೆಗಳಲ್ಲಿ ಸಿಬ್ಬಂದಿಗಳ ವಿವರ.**

| | | |
|---|---|---|
| 1 | ಮೇಲ್ವಿಚಾರಕರು | 4 ಹುದ್ದೆ |
| 2 | ಅಡಿಗೆಯವರು | 7 ಹುದ್ದೆ |
| 3 | ಅಡಿಗೆ ಸಹಾಯಕರು | 4 ಹುದ್ದೆ |
| 4 | ಕಾವಲುಗಾರರು | 2 ಹುದ್ದೆ |

4. **ಕಲಘಟಗಿ ಸಮಾಜ ಕಲ್ಯಾಣ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ 4 ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ.**

ಇದು ಅಲ್ಲದೇ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕಾ ಮಟ್ಟದಲ್ಲಿ ಪ.ಜಾತಿ / ಪ.ವರ್ಗಗಳ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ತಾಲ್ಲೂಕಾ ಮಟ್ಟದಲ್ಲಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಹಾಯಕರಾಗಿ ಕಛೇರಿ ಅಧೀಕ್ಷಕರು ಹಾಗೂ ಇತರೇ ಸಿಬ್ಬಂದಿ ವರ್ಗ ಕೆಲಸ ಮಾಡುತ್ತಿದೆ.

1. ಪ.ಜಾತಿ / ಪ.ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಪ್ರೋತ್ಸಾಹ ಧನ ನೀಡಿಕೆ.
2. ಭಾರತ ಸರ್ಕಾರದ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ.
3. ಪ್ರತಿಭಾ ವಿದ್ಯಾರ್ಥಿ ವೇತನ
4. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು.
5. ಸ್ವಯಂ ಉದ್ಯೋಗಕ್ಕೆ ತರಬೇತಿ, ಕಂಪ್ಯೂಟರ ತರಬೇತಿ, ವಾಹನ ಚಾಲನೆ ತರಬೇತಿ, ಹೊಲಿಗೆ ತರಬೇತಿ, ನರ್ಸಿಂಗ್ ಕೋರ್ಸ್ ತರಬೇತಿ ಹಾಗೂ ವೃತ್ತಿಪರ ತರಬೇತಿ ಇತ್ಯಾದಿ.
6. ಕಾನೂನು ಪದವೀಧರರಿಗೆ ಶಿಷ್ಯವೇತನ ಹಾಗೂ ಸ್ಪೋಕನ್ ಇಂಗ್ಲೀಷ್ ತರಬೇತಿ.
7. ವಿಶೇಷ ಘಟಕ ಯೋಜನೆ / ಗಿರಿಜನ ಉಪಯೋಜನೆಯಡಿ ಧನಸಹಾಯ.
8. ಅಂತರಜಾತಿ ವಿವಾಹಿತರಿಗೆ ಪ್ರೋತ್ಸಾಹಧನ ನೀಡಿಕೆ.
9. ಸವರ್ಣಿಯರಿಂದ ದೌರ್ಜನ್ಯಕ್ಕೆ ಒಳಗಾದ ಪ.ಜಾತಿ / ಪ.ವರ್ಗದವರಿಗೆ ಪರಿಹಾರ ಧನ.
10. ಮಿನಿ ಅಂಬೇಡ್ಕರ್ ಭವನ ನಿರ್ಮಾಣ
11. ಆಶ್ರಯ ಹಾಗೂ ಅಂಬೇಡ್ಕರ್ ಮನೆಗಳ ನಿರ್ಮಾಣದ ಉಸ್ತುವಾರಿ.
12. ಜಾತಿ ಸಿಂಧುತ್ವ ಪರಿಶೀಲನೆ.

2. **ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ತಿಳಿಸಿರುವಂತೆ, ಶೀರ್ಷಿಕೆ (1) ರಲ್ಲಿ ಕಾಣಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ಎಲ್ಲಾ ವಿಷಯಗಳ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಕಾರ್ಯ ನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಕಲಘಟಗಿ ಇವರಿಗೆ ಇರುತ್ತದೆ.

1. **ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಕಲಘಟಗಿ:**

1. ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ ಇವರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುವುದು.
2. ಪ.ಜಾತಿ / ಪ.ವರ್ಗದ ಜನರ ಶ್ರೇಯೋಭಿವೃದ್ಧಿಗಾಗಿ ತಾಲ್ಲೂಕಿನ ಎಲ್ಲಾ ಇಲಾಖೆಯ ಮುಖ್ಯಸ್ಥರೊಂದಿಗೆ ಸಹಕರಿಸುವುದು ಹಾಗೂ ಮೇಲ್ವಿಚಾರಣೆ ನಡೆಸುವುದು.
3. ಕರಡು ಯೋಜನೆ ತಯಾರಿಸುವುದು.
4. ತಿಂಗಳಲ್ಲಿ 15 ದಿನಗಳ ಪ್ರವಾಸ ಕೈಗೊಂಡು, ಇಲಾಖೆಯ ಎಲ್ಲಾ ಸಂಸ್ಥೆಗಳ ಪ್ರಗತಿ ಪರಿಶೀಲನೆ ಕುರಿತು ಕನಿಷ್ಠಾ 10 ದಿವಸಗಳ ವಾಸ್ತವ್ಯ ಮಾಡುವುದು.

2. **ಹೆಚ್ಚುವರಿ ಕರ್ತವ್ಯಗಳು**

1. ಪ.ಜಾತಿ / ಪ.ವರ್ಗದ ಜನರ ಮೇಲೆ ನಡೆಯುವ ದೌರ್ಜನ್ಯ ಹಾಗೂ ಅಸ್ಪೃಶ್ಯತೆ ಕುರಿತು ತಾಲ್ಲೂಕಿನ ಪೊಲೀಸ್ ಇಲಾಖೆಯನ್ನು ಸಂಪರ್ಕಿಸಿ ಮಾಹಿತಿ ಸೂಕ್ತ ಕ್ರಮ ಜರುಗಿಸುವುದು.
2. ಇಲಾಖೆಯ ಸಂಸ್ಥೆಗಳನ್ನು ಹಾಗೂ ವಿಷಯ ನಿರ್ವಾಹಕ ಮೇಜು ತಪಾಸಣಾ ಕಾರ್ಯ.
3. ಶಿಕ್ಷಣ ಹಾಗೂ ಇತರೇ ಸಂಸ್ಥೆಗಳಲ್ಲಿ ಪ. ಜಾತಿ / ಪ. ವರ್ಗದವರ ಮೀಸಲಾತಿ ಹಾಗೂ ಶೈಕ್ಷಣಿಕ ಸಂಸ್ಥೆಗಳಲ್ಲಿ ಪ್ರವೇಶ ಕುರಿತು ಮೀಸಲಾತಿ ನಿಯಮ ಅನುಸರಿಸುವ ಬಗ್ಗೆ ತಪಾಸಣೆ ನಡೆಸಿ ಸೂಕ್ತ ನಿರ್ದೇಶನ ನೀಡುವುದು.
4. ಕೇಂದ್ರ ಕಛೇರಿ / ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಗಳಿಗೆ ಹಾಜರಾಗುವುದು ಹಾಗೂ ಮಾಹಿತಿ ಸಲ್ಲಿಸುವುದು.
5. ಪ್ರತಿ ತಿಂಗಳು ಅನುದಾನ ಹಾಗೂ ಖರ್ಚುಗಳ ತಃಖ್ತೆ ತಯಾರಿಸಿ ಸಲ್ಲಿಸುವುದು.
6. ಗ್ರಾಮ ಸಭೆಗಳಿಗೆ ಹಾಜರಾಗುವುದು ಹಾಗೂ ಫಲಾನುಭವಿಗಳ ಆಯ್ಕೆಯಲ್ಲಿ ಭಾಗವಹಿಸುವುದು.
7. ಪ. ಜಾತಿ / ಪ. ವರ್ಗದ ವಿದ್ಯಾರ್ಥಿಗಳಿಗೆ ನೀಡಿದ ಶಿಷ್ಯವೇತನ ವಿತರಣೆಯನ್ನು ತಾಲ್ಲೂಕಿನ ಎಲ್ಲಾ ಶಾಖಾ ಕಾಲೇಜುಗಳಿಗೆ ಭೇಟಿ ನೀಡಿ ಪರಿಶೀಲಿಸುವುದು.
8. ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆ ಅಡಿಯಲ್ಲಿ ಪ. ಜಾತಿ / ಪ. ವರ್ಗದ ಜನರಿಗೆ ನೀಡಿದ ಸ್ವತ್ತಿಗಳ ಪರಿಶೀಲನೆ
9. ಪ. ಜಾತಿ / ಪ. ವರ್ಗದ ಜನರ ದೂರು ಹಾಗೂ ಸಮಸ್ಯೆಗಳನ್ನು ಪರಿಹರಿಸಲು ಪ್ರಾಮಾಣಿಕ ಪ್ರಯತ್ನ ಮಾಡುವುದು ಇತ್ಯಾದಿ.

3. **ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಅಡಿಯಲ್ಲಿ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಿ ಸ್ವೀಕೃತಿ ರುಜು ಪಡೆಯಲಾಗುವುದು. ತುರ್ತು ಟಪಾಲುಗಳ

ಬಗ್ಗೆ ಆಧ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಕ್ರಮ ಕೈಗೊಂಡು ಅಧಿಕಾರಿಗಳ ಅನುಮೋದನೆಗಾಗಿ ಕಡತಗಳನ್ನು ಮಂಡಿಸುವುದು.

4. **ಇಲಾಖೆಯ ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**
   1. ಕಛೇರಿಯಲ್ಲಿ ಸ್ವೀಕರಿಸಲಾದ ಎಲ್ಲಾ ಕಾಗದ ಪತ್ರಗಳನ್ನು ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
   2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆಗಾಗಿ ಕಛೇರಿ ಸಿಬ್ಬಂದಿಗಳ ಹಾಗೂ ಸಂಸ್ಥೆಗಳ ಸಿಬ್ಬಂದಿಗಳ ಸಭೆಗಳನ್ನು ಏರ್ಪಡಿಸುವುದು.
   3. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ತರಬೇತಿ ಕಾರ್ಯಾಗಾರ ನಡೆಸುವುದು.
   4. ಇಲಾಖಾ ಸಂಸ್ಥೆಗಳ ತಪಾಸಣೆ ಹಾಗೂ ವಿಷಯ ನಿರ್ವಾಹಕ ಮೇಜು ತಪಾಸಣಾ ಕಾರ್ಯ.
   5. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಗೆ ಸೂಕ್ತ ಕ್ರಮ ಕೈಗೊಳ್ಳುವುದು.
5. **ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**
   1. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರದ ಅಧಿಕಾರಿಯನ್ನು ನೇಮಕ ಮಾಡುವುದು.
   2. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ, ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
   3. ಪ. ಜಾತಿ / ಪ. ವರ್ಗದವರಿಗೆ ಆಗುತ್ತಿರುವ ತೊಂದರೆಗಳ ನಿವಾರಣೆಗಾಗಿ ಕ್ರಮ ಕೈಗೊಳ್ಳುವುದು.

**2005ರ ಮಾಹಿತಿ ಹಕ್ಕು ಕಾಯ್ದೆ**

2005ರ ಮಾಹಿತಿ ಕಾಯ್ದೆ (2005ರ ಕೇಂದ್ರ ಕಾಯ್ದೆ 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಘಟಗಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗೆ ಸಂಬಂಧಿಸಿದಂತೆ, ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು, ಕಲಘಟಗಿ ಇವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಅಧಿನಿಯಮದ ಸೆಕ್ಷನ್ 5(2)ರ ಅಡಿಯಲ್ಲಿ ಕಲಘಟಗಿ ತಾಲ್ಲೂಕಾ ಸಮಾಜ ಕಲ್ಯಾಣ ಕಛೇರಿಗೆ ಸಂಬಂಧಿಸಿದಂತೆ ಕಛೇರಿ ಅಧೀಕ್ಷಕರು, ತಾಲ್ಲೂಕಾ ಸಮಾಜ ಕಲ್ಯಾಣ ಕಾರ್ಯಾಲಯ, ಕಲಘಟಗಿ ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯ್ದೆ ಸೆಕ್ಷನ್ 19(1)ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ ಕಲಘಟಗಿ ಇವರನ್ನು ಸದರಿ ಅಧಿನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರಿ" ಎಂದು ನೇಮಕ ಮಾಡಲಾಗಿದೆ.

ಕರಡು ಪ್ರತಿ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಕಲಘಟಗಿ ಇವರಿಂದ ಅನುಮೋದಿಸಲ್ಪಟ್ಟಿದೆ.

ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿಗಳು,
ಪಿ.ಆರ್. 663 ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ.

## VIII$^{TH}$ ADDL. CHIEF METROPOLITAN MAGISTRATE COURT, BANGALORE

**ವಿಷಯ:** ವಾರಸುದಾರರಿಲ್ಲದೇ ಪತ್ತೆಯಾಗಿರುವ ಮಾಲುಗಳ ವಿವರಗಳ ಪ್ರಕಟಣೆ.

**ಉಲ್ಲೇಖ:** ಹೈಗ್ರೌಂಡ್ಸ್ ಪೋಲೀಸ್ ಠಾಣೆ ಸಿ.ಸಿ.ನಂ.29/06, ದಿನಾಂಕ: 16.03.2006.

ಈ ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಹೈಗ್ರೌಂಡ್ಸ್ ಪೋಲೀಸ್ ಠಾಣೆಯಲ್ಲಿ ಈ ಕೆಳಕಂಡ ಮಾಲುಗಳು ಪತ್ತೆಯಾಗಿದ್ದು, ಈ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ಠಾಣಾ ವತಿಯಿಂದ ಎಲ್ಲಾ ಪ್ರಯತ್ನಗಳನ್ನು ಮಾಡಿದ್ದು, ಸಧ್ಯಕ್ಕೆ ವಾರಸುದಾರರು ಯಾರೂ ಪತ್ತೆಯಾಗಿರುವುದಿಲ್ಲ. ಆದ್ದರಿಂದ ಈ ಕೆಳಗೆ ನಮೂದು ಮಾಡಿರುವ ವಿವರಗಳನ್ನು ಪ್ರಚುರಪಡಿಸಲು ಈ ಮೂಲಕ ಸೂಚಿಸಲಾಗಿದೆ.

| ಕ್ರ.ಸಂ. | ಮೊ.ನಂ. | ಪಿ.ಎಫ್. ನಂ. | ಮಾಲುಗಳ ವಿವರ |
|---|---|---|---|
| 1 | 67/04 ಕಲಂ 381 ಐಪಿಸಿ | 11/05 ಐಟಂ 1 | ಒಂದು ಕಾಂಪ್ಯಾಕ್ಟ್ ಕಂಪ್ಯೂಟರ್ ಸಿಸ್ಟಂ |
| 2 | 67/04 ಕಲಂ 381 ಐಪಿಸಿ | 12/05 ಐಟಂ 3&4 | ಒಂದು ಸೋನಿ ಲ್ಯಾಪ್‌ಟಾಪ್ ಬಿಎಂ.10<br>ಒಂದು ಕಂಪ್ಯೂಟರ್ ಲ್ಯಾಪ್‌ಟಾಪ್ |
| 3 | 67/04 ಕಲಂ 381 ಐಪಿಸಿ | 13/05 ಐಟಂ 2 | ಒಂದು ಪ್ಯಾನಸಾನಿಕ್ ಎಲ್.ಸಿ.ಡಿ. ಪ್ರೊಜೆಕ್ಟರ್ |
| 4 | 67/04 ಕಲಂ 381 ಐಪಿಸಿ | 14/05 | ಒಂದು ಕಾಂಪ್ಯಾಕ್ಟ್ ಕಂಪ್ಯೂಟರ್ ಸಿಸ್ಟಂ |

VIII$^{TH}$ Addl. Chief Metropolitan
ಪಿ.ಆರ್. 664 Magistrate Court, Bangalore.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್‌ಆರ್-07/2006, ದಿನಾಂಕ: 15ನೇ ಮಾರ್ಚ್ 2006**

**ಅರ್ಜಿದಾರರು:**
1) ಶ್ರೀ ರಂಗಪ್ಪ @ ರಂಗ ಬಿನ್ ಸಣ್ಣಪ್ಪ
2) ಶ್ರೀ ಜಗದೀಶ ಬಿನ್ ರಂಗಪ್ಪ
ವಾಸ: ಸಾಧನಾ ಟಾಕೀಸು ಹಿಂಭಾಗ,
ಸರಸ್ವತಿಪುರಂ, ಅರಸೀಕೆರೆ.

**ಪ್ರತಿವಾದಿಗಳು**
1) ಶ್ರೀ ಹೆಚ್.ಸಿ. ನಾಗರಾಜು ಬಿನ್ ಚಿಕ್ಕಣ್ಣ,
ಇಂಜಿನೀಯರ್ & ಕ್ಲಾಸ್-1 ಕಾಂಟ್ರಾಕ್ಟರ್,
ಸಾಲಿಗಾಮ ರಸ್ತೆ, ಹಾಸನ.
2) ದಿ ಚೀಫ್ ಸೆಕ್ರೆಟರಿ ಕರ್ನಾಟಕ ಸರ್ಕಾರ, ಬೆಂಗಳೂರು.
3) ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಜಯಮ್ಮ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 30.11.2005 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 666 ಹಾಸನ ಉಪವಿಭಾಗ, ಹಾಸನ.

**FORM NO.155**
**(See Rule 329)**
**Members' Voluntary winding up**
**Name of Company: Sanvik Visions Private Limited**
**Notice convening Final Meeting**

Notice is hereby given in pursuance of section 497 that a General Meeting of the members of above named company will be held at The Registered Office at No.212, Cottonpet Main Road, Bangalore-560 053, on the 31st day of May 2006 at 11.00 AM for the purpose of having an account laid before them showing the manner in which the winding up has been conducted and the property of the company disposed of and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

Dated this 22nd day of April 2006

P.D-42 LIQUIDATOR

**FORM NO.155**
**(See Rule 329)**
**Members' Voluntary winding-up**
**Name of Company: DANAVI FIBRE GLASS PRODUCTS PRIVATE LIMITED**
**Notice convening Final Meeting**

Notice is hereby given in pursuance of section 497 that a General Meeting of the members of the above named company will be held at No.475, Kaval Byrasandra, R.T.Nagar, Bangalore-560 032 on Wednesday, the 31st day of May 2006 at 10.00 A.M. for the purpose of having an account laid before them showing the manner in which the winding-up has been conducted and the property of the company disposed off and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed off.

Dated this 20th day of March 2006

**B. DAYAKAR**
P.D-43 liquidator.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**
**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್ಆರ್-08/2006, ದಿನಾಂಕ: 14ನೇ ಮಾರ್ಚ್ 2006**

**ಅರ್ಜಿದಾರರು:**

1) ಶ್ರೀಮತಿ ರಾಜಮ್ಮ ಕೋಂ ಲೇಟ್ ರಾಜಯ್ಯ
2) ಶ್ರೀ ಸುರೇಶ ಬಿನ್ ಲೇಟ್ ರಾಜಯ್ಯ
3) ಶ್ರೀ ವಿಜಯ ಬಿನ್ ಲೇಟ್ ರಾಜಯ್ಯ
4) ಶ್ರೀ ಲೋಕೇಶ್ ಬಿನ್ ಲೇಟ್ ರಾಜಯ್ಯ
ವಾಸ: ಕೊಳ್ಳಂಗಿ ಗ್ರಾಮ, ಮಲ್ಲಿಪಟ್ಟಣ
ಹೋ:, ಅರಕಲಗೂಡು ತಾಲ್ಲೂಕು.

**ಪ್ರತಿವಾದಿಗಳು**

1) ಶ್ರೀ ತೋಪೇಗೌಡ ಬಿನ್ ಲಕ್ಕೇಗೌಡ,
ಮಾವಿನಹಳ್ಳಿ, ಮಾಸರಂಗಾಲ ಅಂಚೆ, ಮಲ್ಲಿಪಟ್ಟಣ
ಹೋ:, ಅರಕಲಗೂಡು ತಾ:, ಹಾಸನ ಜಿಲ್ಲೆ.
2) ದಿ ಮ್ಯಾನೇಜರ್,
ಓರಿಯಂಟಲ್ ಇನ್ಸೂರೆನ್ಸ್ ಕಂ, ಎಸ್.ವಿ.ನಿಲಯ,
ಬಿ.ಎಂ.ರಸ್ತೆ, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಾಜಯ್ಯ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 30.06.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಭಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 667 ಹಾಸನ ಉಪವಿಭಾಗ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**
**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್ಆರ್–09/2006, ದಿನಾಂಕ: 14ನೇ ಮಾರ್ಚ್ 2006**

**ಅರ್ಜಿದಾರರು:**
1) ಶ್ರೀಮತಿ ಜಯಮ್ಮ ಕೋಂ ಲೇಟ್ ಗುರುಲಿಂಗಪ್ಪ
2) ಶ್ರೀಮತಿ ನಂಜಮ್ಮ ಕೋಂ ಲೇಟ್ ಮಲ್ಲಪ್ಪ
3) ಶ್ರೀ ಶಿವಶಂಕರ ಬಿನ್ ಲೇಟ್ ಗುರುಲಿಂಗಪ್ಪ
4) ಮಿ: ಜಗದೀಶ್ ಬಿನ್ ಲೇಟ್ ಗುರುಲಿಂಗಪ್ಪ
ಮುಸ್ಸವತ್ತೂರು ಗ್ರಾಮ, ಮಲ್ಲಿಪಟ್ಟಣ ಹೋ:,
ಅರಕಲಗೂಡು ತಾಲ್ಲೂಕು.

**ಪ್ರತಿವಾದಿಗಳು**
1) ಶ್ರೀ ತೋಪೇಗೌಡ ಬಿನ್ ಲಕ್ಕೇಗೌಡ,
ಮಾವಿನಹಳ್ಳಿ, ಮಾಸರಂಗಾಲ ಅಂಚೆ,
ಮಲ್ಲಿಪಟ್ಟಣ ಹೋ:, ಅರಕಲಗೂಡು ತಾ:,
ಹಾಸನ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಗುರುಲಿಂಗಪ್ಪ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 30.06.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಭಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 668 ಹಾಸನ ಉಪವಿಭಾಗ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**
**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್ಆರ್–10/2006, ದಿನಾಂಕ: 16ನೇ ಮಾರ್ಚ್ 2006**

**ಅರ್ಜಿದಾರರು:**
1) ಶ್ರೀಮತಿ ಶಶಿಕಲಾ ಕೋಂ ಲೇಟ್ ಹೆಚ್.ಆರ್. ಪ್ರಸನ್ನ
2) ಕಾರ್ತಿಕ್ ಬಿನ್ ಲೇಟ್ ಹೆಚ್.ಆರ್.ಪ್ರಸನ್ನ
ವಾಸ: ಹರದೂರು ಗ್ರಾಮ, ಕಸಬಾ ಹೋಬಳಿ,
ಅರಕಲಗೂಡು ತಾಲ್ಲೂಕು.

**ಪ್ರತಿವಾದಿಗಳು**
1) ಶ್ರೀ ರಮಣರೆಡ್ಡಿ ಬಿನ್ ಚನ್ನಪ್ಪರೆಡ್ಡಿ
ಕೇ:ಆಫ್ ಜಾನಕೀರಾಮರೆಡ್ಡಿ,
ವೇಜರ್ ಗುತ್ತಿಗೆದಾರರು, ಕೊಪ್ಪ ರಸ್ತೆ,
ಎನ್.ಆರ್.ಪುರ, ಚಿಕ್ಕಮಗಳೂರು ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹೆಚ್.ಆರ್.ಪ್ರಸನ್ನ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 12.09.2005 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಭಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 669 ಹಾಸನ ಉಪವಿಭಾಗ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2,**
**ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-5/2006(ಎಫ್), ದಿನಾಂಕ: 15ನೇ ಮಾರ್ಚ್ 2006**

**ಅರ್ಜಿದಾರರು:**

1) ಶ್ರೀಮತಿ ಭಾರತಿ ಕೋಂ ದಿ: ನಾರಾಯಣ ಪೂಜಾರಿ
2) ಮಾ: ನಿತಿನ್‌ಕುಮಾರ್ ಬಿನ್ ದಿ: ನಾರಾಯಣ ಪೂಜಾರಿ (8 ವರ್ಷ)
3) ಕು: ನಿರೀಕ್ಷಾ, ತಂದೆ: ದಿ: ನಾರಾಯಣ ಪೂಜಾರಿ
   2 ಮತ್ತು 3ನೇ ಅರ್ಜಿದಾರರು ಅಪ್ರಾಪ್ತ ವಯಸ್ಕರಾಗಿದ್ದು, ಅವರ ರಕ್ಷಕ/ಗಾಡಿಯನ್ನಾಗಿ 1ನೇ ಅರ್ಜಿದಾರಳಾದ (ತಾಯಿ) ಶ್ರೀಮತಿ ಭಾರತಿ.
4) ಶ್ರೀಮತಿ ಬೊಕ್ಕಿ ಪೂಜಾರ್ತಿ ಕೋಂ ದಿ: ಕಾಳು ಪೂಜಾರಿ.
   ವಾಸ: ಮೂಡ ಅಲೆವೂರು, ಮೂಡ ಅಲೆವೂರು ಗ್ರಾಮ ಮತ್ತು ಅಂಚೆ, ಉಡುಪಿ ತಾಲ್ಲೂಕು, ಜಿಲ್ಲೆ.

**ಪ್ರತಿವಾದಿಗಳು**

1) ಶ್ರೀ ಬಿ.ಬಿ. ಮಧುಸೂದನ್ ಬಿನ್ ಬಿ.ವಿ.ಗಣೇಶಯ್ಯ, 11.1.16ಎ, ಉಡುಪಿ-576101. ವ್ಯವಸ್ಥಾಪಕರು,
2) ನ್ಯಾಶನಲ್ ಇನ್ಸೂರೆನ್ಸ್ ಕಂ. ಲಿ., ಆಭರಣ ಮೋಟಾರ್ಸ್ ಪ್ರೈ. ಲಿ., ಎನ್.ಹೆಚ್-17, ನಿಟ್ಟೂರು, ಉಡುಪಿ-576103.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಭಾರತಿ ಇವರು ತಮ್ಮ ಗಂಡನಾದ ಶ್ರೀ ನಾರಾಯಣ ಪೂಜಾರಿ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 06.01.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-2, ಮಂಗಳೂರು.

ಪಿ.ಆರ್. 670

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2,**
**ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-6/2006(ಎಫ್), ದಿನಾಂಕ: 15ನೇ ಮಾರ್ಚ್ 2006**

**ಅರ್ಜಿದಾರರು:**

1) ಶ್ರೀ ಇಬ್ರಾಹಿಂಯಾನೆ ಪುತ್ತುಮೊನು ಬಿನ್ ಮುಸಾಬ್ಯಾರಿ
2) ಶ್ರೀಮತಿ ಖಲೇಜಮ್ಮ ಕೋಂ ಇಬ್ರಾಹಿಂ
3) ಕುಮಾರಿ ಜೀನತ್ ಬಿನ್ ಇಬ್ರಾಹಿಂಯಾನೆ ಪುತ್ತುಮೊನು
4) ಶ್ರೀ ಉಮ್ಮರ್ ಫಾರೂಕ್ ಬಿನ್ ಇಬ್ರಾಹಿಂಯಾನೆ ಪುತ್ತುಮೊನು
   ವಾಸ: ನೀರಾರಿ ಮನೆ, ಅಂಚೆ: ಪಾಂಡವರಕಲ್ಲು, ಬಡಗಕಜೆಕಾರ್, ಬಂಟ್ವಾಳ ತಾಲ್ಲೂಕು.

**ಪ್ರತಿವಾದಿಗಳು**

1) ಶ್ರೀ ಸುಧಾಕರಶೆಟ್ಟಿ ಬಿನ್ ವಿಠಲಶೆಟ್ಟಿ, ವಾಸ: ಗುತ್ತಿಗೆ ಮನೆ, ಕಣ್ಣೂರು, ಪಡೀಲ್, ಮಂಗಳೂರು.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಸಲ್ಡಾನ ಕಟ್ಟಡ, ಬಲ್ಮಠ ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಇಬ್ರಾಹಿಂಯಾನೆ ಪುತ್ತುಮೊನು ಇವರು ತಮ್ಮ ಮಗನಾದ ಶ್ರೀ ಮೊಹಮ್ಮದ್ ಶಮ್ಮೀರ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 26.12.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಭಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-2, ಮಂಗಳೂರು.

ಪಿ.ಆರ್. 671

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–2, ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು–2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–11/2006(ಎಫ್), ದಿನಾಂಕ: 15ನೇ ಮಾರ್ಚ್ 2006**

**ಅರ್ಜಿದಾರರು:**

1) ಇಸುಫ್ ಬಿನ್ ಪುಕ್ಕಬ್ಯಾರಿ,
2) ಆಸ್ಮಾ, ಕೋಂ ಇಸುಫ್,
3) ಮುನೀರ್ ಬಿನ್ ಇಸುಬು (16 ವರ್ಷ)
4) ಶಮೀಮ, ತಂದೆ: ಇಸುಬು (13 ವರ್ಷ)

ವಾಸ: ಮನೆ ನಂ.1–1684, ಗಾಂಧಿನಗರ ಮನೆ, ಕೆದಿಲಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.

**ಪ್ರತಿವಾದಿಗಳು**

1) ಅಪೋಲೋ ಎಲೆಕ್ಟ್ರಿಕಲ್ಸ್, ಟಿ.ಎಸ್. ಕಾಂಪ್ಲೆಕ್ಸ್, ಮುಖ್ಯರಸ್ತೆ, ಕಲ್ಲಡ್ಕ, ಬಂಟ್ವಾಳ, ಪ್ರೊ.ಸುಲೈಮಾನ್, ಸಹಾಯಕ ಅಬಿಯಂತರು, ಮಸ್ಕೋ, ಪಾಣೆ ಮಂಗಳೂರು ಶಾಖೆ, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಇಸುಫ್ ಇವರು ತಮ್ಮ ಮಗನಾದ ಶ್ರೀ ಮೊಹಮ್ಮದ್ ಶರೀಫ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 19.10.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಠ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–2, ಮಂಗಳೂರು.

ಪಿ.ಆರ್. 672

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್–19/05, ದಿನಾಂಕ: 2ನೇ ಮಾರ್ಚ್ 2006**

**ಅರ್ಜಿದಾರರು:**

1) ಶ್ರೀಮತಿ ಲಕ್ಷ್ಮಕ್ಕ @ ಲಕ್ಷ್ಮಮ್ಮ ವೈಫ್:ಆಫ್ ನರಸಿಂಹಯ್ಯ, ವಯಸ್ಸು 30 ವರ್ಷ
2) ಸಿದ್ದರಾಜು ತಂದೆ: ಲೇಟ್ ನರಸಿಂಹಯ್ಯ, ವಯಸ್ಸು 19 ವರ್ಷ
3) ರಮೇಶ್ ತಂದೆ: ಲೇಟ್ ನರಸಿಂಹಯ್ಯ, ವಯಸ್ಸು 15 ವರ್ಷ
4) ಶ್ರೀನಿವಾಸ ತಂದೆ: ಲೇಟ್ ನರಸಿಂಹಯ್ಯ, ವಯಸ್ಸು 11 ವರ್ಷ

ಎಲ್ಲರ ವಿಳಾಸ: ಹಾಲದ ದೊಡ್ಡೇರಿ ವಿಲೇಜ್, ಕಳ್ಳಂಬೆಳ್ಳ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರತಿವಾದಿಗಳು**

1) ಎಸ್. ಬಸವರಾಜು ತಂದೆ: ಸಿದ್ದಯ್ಯ, ಪ್ರಾಪ್ತರು, ವಾಸ: ಸುರೇನಹಳ್ಳಿ ವಿಲೇಜ್, ತೋವಿನಕೆರೆ ಪೋಸ್ಟ್, ಚನ್ನರಾಯನದುರ್ಗ ಹೋಬಳಿ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ.
2) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ಬಿ.ಹೆಚ್.ರೋಡ್, ತುಮಕೂರು.

**ಪ್ರಕಟಣೆ**

1ನೇ ಅರ್ಜಿದಾರರ ಯಜಮಾನರಾದ ನರಸಿಂಹಯ್ಯ ಇವರು 1ನೇ ಪ್ರತಿವಾದಿ ಟ್ರ್ಯಾಕ್ಟರ್ ಟ್ರೈಲರ್ ಸಂಖ್ಯೆ: ಕೆಎ–06–ಎಂ–2207 ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಲೋಡರ್ ಅನ್‌ಲೋಡರ್ ಕರ್ತವ್ಯನಿರ್ವಹಿಸುತ್ತಿದ್ದಾಗ ದಿನಾಂಕ: 21.11.2005 ರಂದು ರಾತ್ರಿ 10.00 ಗಂಟೆ ಸಮಯದಲ್ಲಿ ಲಕ್ಕೇನ ಹಳ್ಳಿ ಗುಬ್ಬಿ ತಾಲ್ಲೂಕಿನಲ್ಲಿ ನಿಲಗಿರಿ ಗಿಡಗಳನ್ನು ಲೋಡು ಮಾಡಿಕೊಂಡು ಹೋಗುತ್ತಿದ್ದಾ ಸುರೇಕುಂಟೆ ಗೇಟ್ ಎನ್.ಎಚ್.–4 ರಸ್ತೆಯಲ್ಲಿ ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಠ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 678

**ಸಹಕಾರ ಸಂಘಗಳ ಅಪರ ನಿಬಂಧಕರು, (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ಕೊಡಗು ಜಿಲ್ಲಾ ಹಣ್ಣು ಮತ್ತು ತರಕಾರಿ ಸಹಕಾರ ಸಂಘ ನಿ., ಕುಶಾಲನಗರ ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಇವರ ಪತ್ರ ಸಂಖ್ಯೆ: ಜೆಆರ್ಎಂ:ಎಡಿಎಂ: ಎಸ್ಎಸ್ಎನ್:434/79–80, ದಿನಾಂಕ: 26.12.1985.

2) ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶದ ದಿನಾಂಕ: 1.1.1986.

3) ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾಧಿಕಾರಿಯ ಬದಲಾವಣೆ ಆದೇಶ ದಿನಾಂಕ: 6.4.2000.

4) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಇವರ ಪತ್ರ ಸಂಖ್ಯೆ: ಜೆಆರ್ಎಂ:ಬಿ2:653: ಡಿಎಲ್ಎಸ್:2004–05, ದಿನಾಂಕ: 9.6.2005.

5) ಸಮಾಪನಾಧಿಕಾರಿಗಳ ಅಂತಿಮ ಮಹಾಸಭೆಯ ದಿನಾಂಕ: 28.4.2005.

6) ಸಮಾಪನಾಧಿಕಾರಿಗಳ ಪತ್ರ ಸಂಖ್ಯೆ: ಸಅಅ:ಸೋಪೇಟೆ:ಎಲ್ಕ್ಯೂಡಿ:12:85–86, ದಿನಾಂಕ: 27.1.2006.

**ಪೀಠಿಕೆ:**

ಕೊಡಗು ಜಿಲ್ಲಾ ಹಣ್ಣು ಮತ್ತು ತರಕಾರಿ ಸಂಸ್ಕರಣಾ ಸಹಕಾರ ಸಂಘ ನಿ., ಕುಶಾಲನಗರ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: 1980:ಆರ್ಸಿಎಸ್:19:63–64, ದಿನಾಂಕ: 5.10.1963 ರನ್ವಯ ನೋಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಸಂಘದ ಬೈಲಾ ಸಂಖ್ಯೆ (2) ರೀತ್ಯಾ ಕೆಳಕಂಡ 4 ಜಿಲ್ಲೆಗಳ 14 ತಾಲ್ಲೂಕುಗಳಿಗೆ ವ್ಯಾಪಿಸಿರುತ್ತದೆ.

ಅ) ಕೊಡಗು ಜಿಲ್ಲೆ: 1) ಮಡಿಕೇರಿ 2) ವಿರಾಜಪೇಟೆ 3) ಸೋಮವಾರಪೇಟೆ

ಆ) ದಕ್ಷಿಣ ಕನ್ನಡ: 1) ಪುತ್ತೂರು 2) ಮೂಡಬಿದ್ರೆ 3) ಮಂಗಳೂರು

ಇ) ಹಾಸನ ಜಿಲ್ಲೆ: 1) ಆಲೂರು 2) ಅರಕಲಗೂಡು 3) ಹಾಸನ 4) ಹೊಳೆನರಸೀಪುರ

ಈ) ಮೈಸೂರು ಜಿಲ್ಲೆ: 1) ಪಿರಿಯಾಪಟ್ಟಣ 2) ಕೆ.ಆರ್.ನಗರ 3) ಹುಣಸೂರು 4) ಹೆಗ್ಗಡದೇವನಕೋಟೆ

ಸಂಘವನ್ನು ಉಲ್ಲೇಖ (2) ರ ಆದೇಶದಂತೆ ಮೂಲತಃ ದಿನಾಂಕ: 1.1.86 ರಲ್ಲಿ ಸಮಾಪನಗೊಳಿಸಿ, ಸಹಕಾರ ಸಂಘಗಳ ಉಪ ನಿಬಂಧಕರು, ಮಡಿಕೇರಿರವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ನಂತರ ಆಡಳಿತಾತ್ಮಕ ಕಾರಣಗಳಿಂದ ಉಲ್ಲೇಖ (3) ರನ್ವಯ ಸಮಾಪನಾಧಿಕಾರಿಯನ್ನು ಬದಲಾಯಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಸೋಮವಾರಪೇಟೆರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿದೆ.

ಸಮಾಪನಾಧಿಕಾರಿಯವರು ಸಂಘದ ಪ್ರಭಾರ ವಹಿಸಿಕೊಂಡ ನಂತರ ಈ ಕಛೇರಿಯ ಆದೇಶದಂತೆ ಸಮಾಪನಾ ಸಂಘದ ಸಂಪೂರ್ಣ ಆಸ್ತಿ ಜವಾಬ್ದಾರಿಗಳನ್ನು ಕುಶಾಲನಗರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಕ್ಕೆ ವರ್ಗಾಯಿಸಿಕೊಡಲು ಸೂಚನೆ ನೀಡಿದ್ದು ಇದರಂತೆ ಸಮಾಪನಾಧಿಕಾರಿಯವರು ದಿನಾಂಕ: 23.12.2002 ರಂದು ಸಂಘದ ಚರ ಸ್ವತ್ತು ದಾಖಲಾತಿಗಳು ಮತ್ತು ಕಟ್ಟಡವನ್ನು ಕುಶಾಲನಗರ ವ್ಯವಸಾಯೋತ್ಪನ್ನ ಮಾರಟ ಸಹಕಾರ ಸಂಘಕ್ಕೆ ವಹಿಸಿ ಸಮಾಪನಾ ಸಂಘದ 16.53 ಎಕರೆ ಜಮೀನನ್ನು ದಿನಾಂಕ: 9.8.2004 ನೋಂದಣಿ ಮುಖಾಂತರ ಪತ್ರ ಮಾಡಿರುತ್ತಾರೆ.

ಸಮಾಪನಾ ಸಂಘದ ಸಂಪೂರ್ಣ ಆಸ್ತಿ ಜವಾಬ್ದಾರಿಗಳನ್ನು ವರ್ಗಾಯಿಸಿದ ನಂತರ ಸಮಾಪನಾಧಿಕಾರಿಯವರು ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ತಯಾರಿಸಿ ಇಲಾಖೆಯಿಂದ ಆಡಿಟ್ ಮಾಡಿಸಿರುತ್ತಾರೆ. ಹಾಗೂ ದಿನಾಂಕ: 28.4.2005 ರಂದು ನಡೆದ ಅಂತಿಮ ಮಹಾ ಸಭೆಯ ನಡವಳಿಯನ್ನು ಸಲ್ಲಿಸಿರುತ್ತಾರೆ. ಈ ಸಹಕಾರ ಸಂಘವನ್ನು ಸಮಾಪನೆಯಲ್ಲಿ ಉಳಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿರುವುದಿಲ್ಲ. ಆದ್ದರಿಂದ ಸಂಘದ ನೋಂದಣಿಯನ್ನು ರದ್ದುಪಡಿಸಿ ಆದೇಶ ಹೊರಡಿಸುವಂತೆ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಇವರು ಕೋರಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಪರಿಗಣಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಎಲ್ಎಸ್:ಎಲ್ಕ್ಯೂಡಿ:12:85–86, ದಿನಾಂಕ: 20ನೇ ಮಾರ್ಚ್ 2006**

ಪೀಠಿಕೆಯಲ್ಲಿ ಪ್ರತಿವಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ವಿ.ಚನ್ನಪ್ಪ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕೊಡಗು ಜಿಲ್ಲಾ ಹಣ್ಣು ಮತ್ತು ತರಕಾರಿ ಸಂಸ್ಕರಣಾ ಸಹಕಾರ ಸಂಘ ನಿ., ಕುಶಾಲನಗರ ಇದರ ನೋಂದಣಿ ಸಂಖ್ಯೆ: 1980:ಆರ್ಸಿಎಸ್:19:63–64, ದಿನಾಂಕ: 5.10.1963 ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ಥಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 20.03.2006 ರಂದು ಹೊರಡಿಸಲಾಗಿದೆ.

**ವಿ. ಚನ್ನಪ್ಪ**

ಪಿ.ಆರ್. 681 ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ)